

ಏನುಸುಖವೊ ಎಂಥಾ ಸುಖವೊ ಹರಿಯ
ಧ್ಯಾನ ಮಾಡುವವರ ಸಂಗ ||ಪ||

ತಂಬೂರಿ ಮೀಟುತ ದ್ವಯ ಅಂಬಕದಿ ಬಾಷ್ಪಬಿಂದು
ತುಂಬಿ ಆನಂದದಿಂದ ಸಂಭ್ರಮವಾಗಿಹರ ಸಂಗ ||೧||

ಗೆಜ್ಜೆಯ ಕಾಲಲ್ಲಿ ಕಟ್ಟಿ ಲಜ್ಜೆ ಬಿಟ್ಟು ಹರಿಯನಾಮ
ಗರ್ಜನೆಮಾಡುತ್ತ ಅಘವರ್ಜಿತರಾಗಿಪ್ಪವರ ಸಂಗ ||೨||

ಪುಷ್ಪದಿ ಸುಗಂಧ ಹ್ಯಾಗೆ ಇಪ್ಪದೊ ತದ್ವತು ಜಗ
ದಪ್ಪ ಬ್ರಹ್ಮಾದಿಗಳಳೊಗಿಪ್ಪೆನೆನ್ನುವರ ಸಂಗ ||೩||

ತುಚ್ಛ ವಿಷಯವ ಬಿಟ್ಟು ನಿಶ್ಚಲಭಕುತಿಯಿಂದ
ಅಚ್ಯುತಾನಂದನ ಪಾದ ಮೆಚ್ಚಿಸಿದವರ ಸಂಗ ||೪||

ದರ್ವಿಯಂತೆ ಜೀವವನ್ನು ಸರ್ವತ್ರ ತಿಳಿದು ಶೇಷ
ಪರ್ವತವಾಸನ ಕಂಡು ಉರ್ವಿಯೊಳಿಹರ ಸಂಗ ||೫||

ನಡೆವುದು ನುಡಿವುದು ಕೊಡುವುದು ಕೊಂಬುವುದು
ಒಡೆಯನ ಪ್ರೇರಣೆಯೆಂದು ನುಡಿದು ಹಿಗ್ಗುವರ ಸಂಗ ||೬||

ಸೃಷ್ಟಿಗೊಡೆಯನ ಮನವಿಟ್ಟು ಭಜಿಸುವ ಜ್ಞಾನ
ಶಿಷ್ಟರಾದ ಸಿರಿಕೃಷ್ಣಗಿಷ್ಟರಾಗಿಪ್ಪರ ಸಂಗ ||೭||

---ಶ್ರೀ ವ್ಯಾಸರಾಯರು.

ಸಂದರ್ಶಿಸಿ. ಆನಂದಿಸಿ.

# ಶ್ರೀ ವೇದನಾರಾಯಣ ಸ್ವಾಮಿ ದೇವಾಲಯ

## ನಾಗುಲಾಪುರಂ



# ವಾರ್ಷಿಕ ಬ್ರಹ್ಮೋತ್ಸವಗಳು

3--5--93 ರಿಂದ 12--5--93

**ಕಾರ್ಯಕ್ರಮ ವಿವರ**

| ದಿನಾಂಕ | ವಾರ | ಬೆಳಗ್ಗೆ | ಸಂಜೆ |
|---|---|---|---|
| 3--5--93 | ಸೋಮವಾರ | ---- | ಅಂಕುರಾರ್ಪಣೆ. |
| 4--5--93 | ಮಂಗಳವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ. |
| 5--5--93 | ಬುಧವಾರ | ಚಿಕ್ಕ ಶೇಷವಾಹನ | ಹಂಸವಾಹನ. |
| 6--5--93 | ಗುರುವಾರ | ಸಿಂಹವಾಹನ | ಮುತ್ತಿನ ಚಪ್ಪರವಾಹನ. |
| 7--5--93 | ಶುಕ್ರವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ. |
| 8--5--93 | ಶನಿವಾರ | ಮೋಹಿನೀ ಅವತಾರ | ಗರುಡೋತ್ಸವ. |
| 9--5--93 | ಭಾನುವಾರ | ಹನುಮಂತ ವಾಹನ<br>ಸಂಜೆ -- ವಸಂತೋತ್ಸವ | ಗಜವಾಹನ. |
| 10--5--93 | ಸೋಮವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 11--5--93 | ಮಂಗಳವಾರ | ರಥೋತ್ಸವ | ಅಶ್ವವಾಹನ. |
| 12--5--93 | ಬುಧವಾರ | ಅವಭೃಥ | ಧ್ವಜಾವರೋಹಣ. |

ಸೂಚನೆ : * ನಾಗುಲಾಪುರಂ ತಿರುಪತಿ -- ಮದರಾಸು ದಾರಿಯಲ್ಲಿ ಪುತ್ತೂರಿನಿಂದ 30 ಕಿ.ಮಿ ದೂರದಲ್ಲಿದೆ. ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ಭವ್ಯವೂ ದಿವ್ಯವೂ ಆದ ಈ ದೇವಾಲಯವನ್ನು ತಿ.ತಿ.ದೇ. ಆಡಳಿತವೇ ನೋಡಿ ಕೊಳ್ಳುತ್ತಿದೆ.

ನೀವೂ ಬನ್ನಿ ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ




ಗೌರವ ಸಂಪಾದಕರು :

ಶ್ರೀ ಡಿ.ವಿ.ಎಲ್.ಎನ್. ಮೂರ್ತಿ, ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ

ತಿ.ತಿ.ದೇ., ತಿರುಪತಿ.

ಸಂಪಾದಕ :

ಕೆ. ಸುಬ್ಬಾರಾವ್ ಎಂ.ಎ.

ಉಪಸಂಪಾದಕ :

ಬಿ.ಎನ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಮಿಕ್ಕ ವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

---

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

---

**ಬಿಡಿ ಪ್ರತಿ ೧--೦೦**

**ವಾರ್ಷಿಕ ಚಂದಾ ೧೨--೦೦**





**ಸಂಪುಟ ೨೩]** **ಏಪ್ರಿಲ್ ೧೯೯೩** **[ಸಂಚಿಕೆ ೧೧**


# ವಿಷಯಸೂಚಿ


ಸಂಪಾದಕೀಯ .....4

ಶ್ರೀಮದ್ರಾಮಾಯಣ ರಹಸ್ಯ --ಡಾ. ವಿ.ಎಸ್.ಎಸ್. ಆಚಾರ್ಯ .....5

ಶ್ರೀ ರಾಮಾವತಾರ ---ಬಿ. ಎ. ಗುಡಿ .....9

ಶ್ರೀ ಶಂಕರಾಚಾರ್ಯರು ---ಎಚ್.ವಿ. ನರಸಿಂಹಮೂರ್ತಿ .....13

ಶ್ರೀ ಯೋಗಾನರಸಿಂಹ ಸುಪ್ರಭಾತ ---ಬಿ.ಎಸ್. ವೇಣುಗೋಪಾಲ್ .....17

ಶ್ರೀ ವೆಂಕಟೇಶ್ವರ ಸುಪ್ರಭಾತ .....20

ಎರಡು ಶ್ರೀವೈಷ್ಣವ ಮತಗಳು ಸಿ. ಗೋವಿಂದಾಚಾರ್.....24

ಧೀರಸಮೀರೆ...... ---ಬ. ನ. ಗುಂಡೂರಾವ್ .....29

ಶಿಕ್ಷಣ -- ಕಾಳಿದಾಸ ---ಆರ್. ಎನ್. ಅರಳೀಕಟ್ಟಿ.....31

ಕಶ್ಯಪ ಋಷಿ ---ಕೆ. ಕೇಶವನ್ .....33

ವಾರ್ತಾಲಹರಿ .....37


---

ಮುಖಚಿತ್ರ : ಶ್ರೀ ರಾಮಾನುಜಾಚಾರ್ಯರು -- ಚಿತ್ರ--ಕೆ. ಜಗದೀಶ್.

ಹಿಂಬದಿಯಲ್ಲಿ : ಶ್ರೀ ಶಂಕರಾಚಾರ್ಯರು -- ಚಿತ್ರ-- ನಾರಾಯಣಗಿರಿದತ್ತು.

ಒಳಗಡೆ : 1. ತಿರುಪತಿಯ ಶ್ರೀ ಕೋದಂಡರಾಮಸ್ವಾಮಿ ದೇವಾಲಯ.

2. ತಿರುಮಲೆಯಲ್ಲಿ ವಸಂತೋತ್ಸವ.




"ರಾಮನವಮಿಯ ದಿವಸ ರಾಮನಾಮಾಮೃತವೆ ಪಾನಕ ಪನಿವಾರ ಕೋಸಂಬರಿ"

ರಾಮನವಮಿ ಬಂದಿದೆ. ರಾಮ ಮನುಷ್ಯನೊ? ದೈವವ್ವೋ? ಎಂಬುದು ಅನೂಚಾನದಿಂದ ಕೇಳಿ ಬರುತ್ತಿರುವ ಪ್ರಶ್ನೆಯೇ ಆದರೂ ಇಂದು ಹೊಸ ಅವಧಾರಣೆ ಹೊಂದಿ ಕೇಳಲ್ಪಡುತ್ತಿರುವ ಪ್ರಶ್ನೆಯಾಗಿದೆ. ಸಾರ್ವಕಾಲಿಕವಾದ ಆದರ್ಶ ರೂಪಿಯಾದ ರಾಮ ಎರಡೂ ಹೌದು ಎನ್ನಲು ಅವನ ಚರಿತ್ರೆಯನ್ನು ಪ್ರಥಮವಾಗಿ ಲೇಖನಕ್ಕಿಳಿಸಿದ ವಾಲ್ಮೀಕಿಯನ್ನೇ ಆಧಾರವಾಗಿಟ್ಟುಕೊಂಡು ವಾದಗಳನ್ನು ನಡೆಸಲು ಸಾಧ್ಯ. ಭಾರತೀಯ ಸಂವಿಧಾನದಲ್ಲೂ ರಾಷ್ಟ್ರೀಯ ಪುರುಷ ಎಂಬುದಾಗಿ ಸ್ಥಳ ಗಳಿಸಿರುವ ಆತನ ದಿವ್ಯ ಮಂಗಳ ವಿಗ್ರಹ ಪರಂಪರೆಯಿಂದ ಪೂಜೆಗೊಂಡು ಬಂದಿರುವುದೇ ಅಲ್ಲದೆ ವಿವಿಧ ಸಂಘಸಂಸ್ಕರ್ತರ, ಪಂಥ ಪುನರುದ್ಧಾಟಕರ ಅಭಿಮಾನದ, ಗೌರವದ ಉದಾಹರಣೆಯೂ ಆಗಿದೆ ಎಂಬುದನ್ನು ಮರೆಯುವಂತಿಲ್ಲ. ಪುಲಿನ ತುಹಿನಗಳ ಮಧ್ಯದ ಭಾರತದಲ್ಲಿ ಸೀಮಿತವಾಗದೆ ಅದರಾಚೆಗೂ, ಕಥೆಯಾಗಿ, ಆದರ್ಶವಾಗಿ, ನಿತ್ಯಜೀವನದ ಅವಿಭಾಜ್ಯ ಅಂಗವಾಗಿ ನಡೆದು, ಕಾಲವನ್ನು ಮೀರಿದ ಮಾನವನಾಗಿ, ಕಾಲವನ್ನು ನಿಯಮಿಸುವ ಕರ್ತೃವಾಗಿ ಗೌರವವನ್ನು ಪಡೆಯುತ್ತಿದ್ದಾನೆ ಎಂದರೆ ಆತ ಬರೀ 'ದಶರಥಾತ್ಮಜ' ಎಂದೂ, 'ಅವನೊಂದಿಗೆ ಇದ್ದೆ ನಾನು' ಎಂದೂ ತಳ್ಳಿಬಿಡಬರುವಂತಿಲ್ಲ. ಆತ ಆ ಎತ್ತರಕ್ಕೆ ಏರಲು ಕವಿ ಗಾಯಕ ನಟ ವಿದೂಶಕರು ಮಾತ್ರವೇ ಕಾರಣ ಎಂದು ಬೆರಳು ಮಾಡಿ ತೋರಿಸಲೂ ಆಗದು.

ಚಿತ್ತ ಹುತ್ತಗಟ್ಟದೆ ಈ ರೂಪರೇಖೆ ಕಂಡುಬರದು ಎಂಬ ಮಾತು ಇದೆ. ಚಿತ್ತ ಹುತ್ತಗಟ್ಟದೆ ಈ ವ್ಯಕ್ತಿಯೂ ಸಾಧ್ಯವಿಲ್ಲ ಎನ್ನಬೇಕು. ಅದಕ್ಕೆ ತಕ್ಕಂತೆ ವಾಲ್ಮೀಕಿಯಲ್ಲಿ ರಾಮ ಸುಲಭನೇ ಆದರೂ ಗಂಭೀರ, ಸಖನೇ ಆದರೂ ಸ್ವಾಮಿ, ಸಲುಗೆ ಇದ್ದರೂ ಸಲೀಸು ಅಲ್ಲ ಎನ್ನುವಂತೆ ಯಾವಾಗಲೂ ಅತ್ಯತಿಷ್ಠದ್ದಶಾಂಗುಲನಾಗಿಯೇ ಕಂಡುಬರುತ್ತಾನೆ. ಎಂತಲೇ ಅವ ಹಿರಿಯನಾದ. ತತ್ತ್ವವನ್ನು ಎಡಬಿಡದೆ ಮಥಿಸಿ, ಜ್ಞಾನ ನವನೀತವನ್ನು ಸದ್ಯೋಜಾತವಾಗಿ ಪಡೆದು, ಅರಿವಿನಿಂದ ಆಚರಿಸಿ ಆದರ್ಶವಾದ, ದೈವವಾದ. ಹಾಗಾಗಿಯೇ ವಿಗ್ರಹವಾನ್ ಧರ್ಮಃ ಎಂಬ ಪ್ರಸಿದ್ಧಿ ಆತನದಾಯಿತು.

ನಾವೆಲ್ಲಿದ್ದೇವೆ? ಸಾವಿರಾರು ವರ್ಷಗಳಿಂದ ಆಚರಿಸುತ್ತ ಬಂದಿರುವ, ಆದರ್ಶಕ್ಕೊಂದು ಆಲಂಬವಾಗಿರುವ ರಾಮನವಮಿಯ ಮೂಲವೇನು ಎಂಬ ಜಿಜ್ಞಾಸೆಯಲ್ಲಿ ತೊಡಗಿದ್ದೇವೆ. ಒಳಗಿನ ತತ್ತ್ವದ ದೈವವನ್ನು ಬಿಟ್ಟು ಹೊರಗಣ ಕಂಬ ಸುತ್ತುವ ಎತ್ತಿನಂತೆ ಆಗಿದೆ ಬದುಕು. 'ಗರಿಷ್ಠ ತೇಜದ ಮೊನೆ ಕಳಪಟ್ಟು ಮಣ್ಣುಟ್ಟು ನಿಂತ.... ಘಟನೆ'ಯನ್ನು ಮನಸ್ಸಿನಲ್ಲಿ ಮೂಡಿಸಿಕೊಳ್ಳಲಾಗದೆ ಭಾವ ದಾರಿದ್ರ್ಯದಲ್ಲಿರುವುದರಿಂದ ಇಂತಹ ಗೊಂದಲವಾಗಿದೆಯೆನ್ನಿಸುತ್ತದೆ.

ರಾಮನನ್ನು ನೆನೆವುದೆ ಸುಖವೆಂದರು. ಅವನ ನೆನಪಿನಿಂದ ಅವನ ಜೀವನದ ಅಯನವೂ ನೆನಪಿಗೆ ಬಂದು ಆದರ್ಶಕ್ಕಾಗಿ ದುಡಿಯುವ, ಸರ್ವಭೂತಗಳಿಗೂ ಅಭಯಪ್ರದಾತನಾದ ಆತನ ಚರಿತ್ರೆ ಮತ್ತೆ ಮತ್ತೆ ದಾರಿ ತೋರುವಂತಾಗಲಿ ಎಂದು ಹಾರೈಸುವ.

# ಶ್ರೀಮದ್ರಾಮಾಯಣ ರಹಸ್ಯ

---ಡಾ. ವಿ.ಎಸ್. ಸಂಪತ್ಕುಮಾರಾಚಾರ್ಯ.

> ವಾಮೇ ಭೂಮಿಸುತಾ ಪುರಸ್ತು ಹನುಮಾನ್ ಪಶ್ಚಾತ್ ಸುಮಿತ್ರಾಸುತಃ
> ಶತ್ರುಘ್ನೋ ಭರತಶ್ಚ ಪಾರ್ಶ್ವದಲಯೋಃ ವಾಯ್ವಾದಿಕೋಣೇಷು ಚ
> ಸುಗ್ರೀವಶ್ಚ ವಿಭೀಷಣಶ್ಚ ಯುವರಾಟ್ ತಾರಾಸುತೋ ಜಾಂಬವಾನ್,
> ಮಧ್ಯೇ ನೀಲಸರೋಜ ಕೋಮಲರುಚಿಂ ರಾಮಂ ಭಜೇ ಶ್ಯಾಮಲಮ್
>
> * * * * * * * * * * * * * * * * * * * * * * * * * * * * * *
>
> ವಿತರಸಿ ದಿಕ್ಷುರಣೇ ದಿಕ್ಪತಿ ಕಮನೀಯಂ ದಶಮುಖ ಮೌಲಿ ಬಲಿ ರಮಣೀಯಮ್
> ಕೇಶವ ಧೃತರಾಮಶರೀರ ಜಯ ಜಗದೀಶಹರೇ (ಜಯದೇವಕವಿ)

ಭಾರತೀಯರಲ್ಲಿ ಶ್ರೀರಾಮನ ಸ್ಮರಣೆ ಮಾಡದ ರಿಲ್ಲ ಎಂದರೆ ಅತಿಶಯೋಕ್ತಿಯಲ್ಲ. ಸಕಲರೂ ಮ್ಮ ಮಕ್ಕಳಿಗೆ ಈ ನಾಮವನ್ನಿಟ್ಟು ವಿಷ್ಣುನಾಮ ಂದೋ, ರಾಮ ರಾಜ್ಯದ ಮೂರ್ತಿಯೆಂದೋ, ್ಣ ಶಬ್ದವೆಂದೋ, ಸದಾ ಆನಂದ ಉಂಟಾಗ ಂದೋ, ಈ ನೆಪದಲ್ಲಾದರೂ ಭಗವನ್ನಾಮಸ್ಮ ೆ ಆಗಲೆಂದೋ ಕರೆಯುವುದುಂಟು. ಭಾರ ದೇಶವು ಮಹಾಪುರುಷರನಾಡು; ಸತ್ಯವಂತರ ಾಡು; ತ್ಯಾಗಿಗಳ; ಆದರ್ಶಪುರುಷರನಾಡು; ವೀರ ರುಷರ ರಮಣಿ. ಇಂತಹ ನಾಡಿನಲ್ಲಿ ಅಯೋ ್ಯನಗರವು ತ್ರೇತಾಯುಗದಲ್ಲಿ ಉತ್ತರ ಭಾರತ ಲ್ಲಿ ಗುಡಿಗೋಪುರಗಳಿಂದ ಕೂಡಿ, ವಿಶಾಲವಾದ ಾಜ ಭವನಗಳಿಂದ ಕಂಗೊಳಿಸುತ್ತಿತ್ತು. ಈ ಾಜಧಾನಿಯಲ್ಲಿ ಅಜರಾಜನ ಮಗನಾದ ದಶರಥ ಹಾರಾಜನು ದಶದಿಕ್ಕುಗಳನ್ನು ಗೆದ್ದು ರಾಜ್ಯವಾ ್ತ ಖ್ಯಾತನಾಗಿದ್ದನು. ಬಹಳ ಕಾಲದವರೆಗೆ ಕ್ಕಳಾಗದೆ ಚಿಂತಾಕ್ರಾಂತನಾಗಿ, ಪುತ್ರಕಾಮೇಷ್ಟಿ ಾಗವನ್ನು ಮಾಡಿದನು. ಯಜ್ಞಕುಂಡದಿಂದ ಗ್ನಿಯು ಪರಮಾನ್ನ ಪಾತ್ರೆಯನ್ನು ತಂದುಕೊ ್ನು. ಆ ಪರಮಾನ್ನವನ್ನು ತನ್ನ ಮೂವರು ಪತ್ನಿ ರಾದ ಕೌಸಲ್ಯೆ, ಕೈಕೇಯಿ, ಸುಮಿತ್ರೆಗೆ ವಿಭಾ ಮಾಡಿ ಹಂಚಿ ಭಕ್ಷಿಸಲು ಕೊಟ್ಟನು. ತತ್ಫಲ ಾಗಿ ಸರ್ವಲೋಕ ನಮಸ್ಕೃತನೂ, ಜಗನ್ನಾಯ ಕೂ, ಸರ್ವಲಕ್ಷಣ ಸಂಪನ್ನನೂ ಆಗಿದ್ದ, ಇಕ್ಷ್ವಾಕು ಲವರ್ಧನನಾದ, ವಿಷ್ಣುವಿನ ಅರ್ಧಾಂಶದಿಂದ ಾಡಿದ್ದ ಮಹಾ ಭಾಗನಾದ, ಮಹಾಪುರುಷನಾದ ೇಜಃಪುಂಜವಾದ ಶಿಶು ಶ್ರೀರಾಮನನ್ನು ಪ್ರಸವಿಸಿ ಳು. ಸಾಕ್ಷಾದ್ವಿಷ್ಣುವಿನ ನಾಲ್ಕನೇ ಒಂದು ಅಂಶ ಂದ ಕೂಡಿ ಸಕಲ ಕಲ್ಯಾಣಗುಣ ಸಂಪನ್ನನಾಗಿ, ್ಯ ಪರಾಕ್ರಮನಾದ ಭರತನೆಂಬ ಹೆಸರಿನ ರಾಜಪು ು ಕೈಕೇಯಿಯಲ್ಲಿ ಹುಟ್ಟಿದನು. ಸರ್ವಾಸ್ತ್ರ ಕುಶ ರಾದ, ವೀರರಾದ, ವಿಷ್ಣುವಿನ ಅರ್ಧಾಂಶ ಸಮ ್ರರಾದ ಲಕ್ಷ್ಮಣ, ಶತ್ರುಘ್ನರೆಂಬ ಯಮಳರನ್ನು ಮಿತ್ರಾ ದೇವಿಯು ಪ್ರಸವಿಸಿದಳು.

ರಾಮಾಯಣದ ಕಥೆ ಬಹುತೇಕವಾಗಿ ಎಲ್ಲ ೂ ತಿಳಿದೇ ಇದೆ. ಆದ್ದರಿಂದ ಆ ಕಥೆಯ ಂದೆ ಇರುವ ದಿವ್ಯವಾದ ತತ್ವವನ್ನು ತಿಳಿಯಲು ಪ್ರಯತ್ನಿಸೋಣ. ರಾಮಾಯಣವು ಅಧ್ಯಾತ್ಮಶಾಸ್ತ್ರವೂ ಹೌದು; ಕುಟುಂಬ ಶಾಸ್ತ್ರವೂ ಹೌದು; ನೀತಿ ಶಾಸ್ತ್ರವೂ ಹೌದು; ರಾಜ್ಯಶಾಸ್ತ್ರವೂ ಹೌದು. 'ಆದಿಕಾವ್ಯಮಿದಂ ಪ್ರೋಕ್ತಂ ಪುರಾವಾಲ್ಮೀಕಿನಾಕೃತಮ್' -- ಇದು ಆದಿಕವಿ ವಾಲ್ಮೀಕಿಮುನಿಪುಂಗವ ಪ್ರಣೀತವಾದ ಆದಿಕಾವ್ಯವಾಗಿದೆ. ತನ್ನ ಮಧುರವಾಣಿಗಳಿಂದ ಮುಂದಿನ ಕವಿಗಳಿಗೆಲ್ಲಾ ಮಾರ್ಗತೋರಿದ ಮಹರ್ಷಿ ವಾಲ್ಮೀಕಿ. 'ಮಧುಮಯ ಫಣಿತೀನಾಂ ಮಾರ್ಗದರ್ಶೀ ಮಹರ್ಷಿಃ'. ಈ ಮುನಿಪುಂಗವರಿಂದ ಭಾರತಾದ್ಯಂತ ಅನೇಕ ಮಹಾಕವಿಗಳು ಸ್ಫೂರ್ತಿ ಪಡೆದು ಅನೇಕ ರಾಮಾಯಣಗಳು ಅವತಾರಮಾಡಿವೆ. ಕವಿತೆಯ ಶಾಖೆಯನ್ನೇರಿ 'ರಾಮ ರಾಮ' ಎಂದು ಪಂಚಮಶ್ರುತಿಯಲ್ಲಿ ಗಾನಮಾಡುತ್ತಿರುವ ಈ ವಾಲ್ಮೀಕಿ ಕೋಕಿಲದ ಇಂಚರದ ಆಕರ್ಷಣೆಗೆ ಒಳಗಾಗದವರಾರು? ಈ ಮಹಾಕಾವ್ಯವು ನಮ್ಮ ದೇಶದ ಜನರ ಐಕ್ಯತೆಯ ಒಂದು ಪ್ರಮುಖ ಸಾಧನವಾಗಿದೆ.

ವಾಲ್ಮೀಕಿ ಮುನಿಪುಂಗವರು ನಾರದ ಮಹರ್ಷಿಯನ್ನು ಉತ್ತಮಪುರುಷನ ಬಗ್ಗೆ 'ಕೋನ್ವಸ್ಮಿನ್ ಗುಣವಾನ್ ಲೋಕೇ' ಎಂದು ಪ್ರಶ್ನಿಸುತ್ತಾರೆ. ಆ ಪ್ರಶ್ನೆಗೆ ಉತ್ತರವಾಗಿ, 'ಇಕ್ಷ್ವಾಕು ವಂಶ ಪ್ರಭವಃ ರಾಮೋನಾಮ ಮಹಾಯಶಾಃ' -- ನೀನು ಹೇಳುವ ಸಕಲ ಗುಣಗಳಿಂದಲೂ ಕೂಡಿರುವ ಮಹಾಪುರುಷನೇ ಶ್ರೀರಾಮನು ಎನ್ನುತ್ತಾರೆ. ಹೀಗೆ ಬ್ರಹ್ಮದೇವನಿಂದ ಕಳುಹಿಸಲ್ಪಟ್ಟ ನಾರದ ಮಹರ್ಷಿಯ ಆದೇಶದಂತೆ ವಾಲ್ಮೀಕಿ ಮುನಿಪುಂಗವರು ರಾಮಾಯಣವನ್ನು ರಚಿಸಿದರು. ಶ್ರೀ ಪಿಳ್ಳೈ ಲೋಕಾಚಾರ್ಯರು ಶ್ರೀ ರಾಮಾಯಣವನ್ನು ಇತಿಹಾಸ ಶ್ರೇಷ್ಠ ಎಂದು ಕೊಂಡಾಡಿದ್ದಾರೆ. ವೇದದಿಂದಲೇ ತಿಳಿದುಬರುವ ಪರಮಪುರುಷನು ದಶರಥನ ಪುತ್ರನಾಗಿ ಅವತರಿಸಿದಾಗಿ, ಹಾಗೇಯೇ ಆ ವೇದವೂ ಆ ಪರಮಾತ್ಮನ ಕಲ್ಯಾಣಗುಣಗಳನ್ನು, ಆಶ್ಚರ್ಯಕರವಾದ ಕಾರ್ಯಗಳನ್ನು ತಿಳಿಸಲು ಶ್ರೀ ವಾಲ್ಮೀಕಿ ಮುನಿಪುಂಗವರ ಮೂಲಕ ರಾಮಾಯಣವಾಗಿ ರಾಮಚರಿತ್ರೆಯಾಗಿ ಅವತರಿಸಿತು ಎಂಬ ಅರ್ಥವುಳ್ಳ ಸ್ಕಾಂದವಚನವನ್ನು ನೋಡಿದರೆ ಅದರ ಮಹಿಮೆಯು ಚೆನ್ನಾಗಿ ವೇದ್ಯವಾಗುತ್ತದೆ.

> ವೇದ ವೇದ್ಯೇ ಪರೇಪುಂಸಿ
> ಜಾತೇ ದಶರಥಾತ್ಮಜೇ
> ವೇದಃ ಪ್ರಾಚೇತಸಾದಾಸೀತ್
> ಸಾಕ್ಷಾದ್ರಾಮಾಯಣಾತ್ಮನಾ

ಈ ಕಾವ್ಯದ ನಾಯಕ ಧೀರೋದಾತ್ತನಾಗಿ ಏಕತ್ರ ದುರ್ಲಭವಾಗಿರುವ ಸಮಸ್ತ ಕಲ್ಯಾಣ ಗುಣಗಳಿಂದ ಪರಿಪೂರ್ಣನಾಗಿರುವ ಭಗವದವತಾರ ಪುರುಷ ಶ್ರೀ ರಾಮಚಂದ್ರ. ನಾಯಕಿಯು ಸತ್ಯ, ಧೃತಿ, ಕುಶಲತೆ, ಕ್ಷಮೆ ವಾತ್ಸಲ್ಯಾದಿ ಗುಣಗಳಿಂದ ಅತನಿಗೆ ಸರ್ವಾತ್ಮನಾ ಸಹಧರ್ಮಿಣಿಯಾಗಿರುವ ಸೀತಾದೇವಿ. ಆದ್ದರಿಂದ ಈ ಕಾವ್ಯವು ರಾಮಾಯಣವಾಗಿರುವಂತೆಯೇ 'ಸೀತಾಯಾಶ್ಚರಿತಂ ಮಹತ್' ಎಂಬಂತೆ ಸೀತಾಯನವೂ ಆಗಿದೆ. ನಾಯಕ ಮಣಿಯಾಗಿರುವ ಶ್ರೀ ರಾಮನು ಪುರುಷೋತ್ತಮ. ಪ್ರಧಾನವಾಗಿ ಹೃದಯದಲ್ಲಿ ನೆಲೆಸುವ ಪಾತ್ರ. ಉಳಿದ ಎಲ್ಲಾ ಪಾತ್ರಗಳ ಕರ್ಮಗಳಿಗೂ ಕೇಂದ್ರವಾಗಿರುವ ಪಾತ್ರ. ಅವನು ಸರ್ವರಸಗಳಿಗೂ ಆಶ್ರಯ. ಸೀತಾ ವಿಲಾಸದಲ್ಲಿ ಶೃಂಗಾರರಸವನ್ನೂ, ಧನುರ್ಭಂಜನದಲ್ಲಿ ವೀರರಸವನ್ನೂ, ಕಾಕಾಸುರನ ವಿಷಯದಲ್ಲಿ ಕರುಣರಸವನ್ನೂ, ಸಮುದ್ರಸೇತು ಸ್ಥಾಪನೆಯಲ್ಲಿ ಅದ್ಭುತರಸವನ್ನೂ, ಶೂರ್ಪನಖಿಯ ವಿಷ

# ಕಡೆಹಾಯಿಸಯ್ಯ



ಕಡಲ ಶಯನನೆ
ಕಡೆಹಾಯಿಸಯ್ಯ ಪಲ್ಲ

ಕಡುಮೂರ್ಖನೆಂದು
ಕಡೆಗಣಿಸದೆ ನೀನು ಅ.ಪ

ಮಂದರೋದ್ಧರನೇ
ಮುಂದು ಕೈಪಿಡಿಯೋ
ಮಂದಿಯೊಳಗೆನ್ನ
ಮಂದನ್ನ ಮಾಡದೆ ೧

ನಂದನಕಂದನೆ
ಇಂದಿರೆಯರಮಣ
ಬಂದೆನ್ನನೀ ನಡೆಸೋ
ಕಂದರ್ಪ ಜನಕನೆ ೨

ಅಂಜಿರುವೆನಯ್ಯ ಭವ
ಪಂಜರವಲ್ಲಿ ಸಿಕ್ಕು
ಹಿಂಜದೇಡೆನ್ನನು
ಕುಂಜರ ರಕ್ಷಕನೆ ೩

ಬಡವನು ನಾನಯ್ಯ
ಪೊಡವಿ ಪಾಲಕನೆ
ದೃಢ ಬಕುತಿಯನಿತ್ತು
ದಡಸೇರಿಸೆನ್ನನು ೪

ಪಾಮರ ನಾನಯ್ಯ
ಸಾಮಗಾನಪ್ರಿಯ
ಆಮಿಷ ತೋರಿಸಿ
ನೀ ಮರೆಯಬೇಡ ೫

---ಎಸ್. ವೆಂಕಟರಾಘವ.

ಯದಲ್ಲಿ ಹಾಸ್ಯರಸವನ್ನೂ, ಯುದ್ಧರಂಗದಲ್ಲಿ ಬೀಭತ್ಸರಸವನ್ನೂ, ರಾವಣ ಸಂಹಾರದಲ್ಲಿ ರೌದ್ರರಸವನ್ನು ತೋರಿದರೂ ಮುನಿಜನರ, ಭಕ್ತರ ಹೃದಯದಲ್ಲಿ ಶಾಂತರಸದ ಘನಮೂರ್ತಿಯಾಗಿರುವ ಲೋಕೋತ್ತರ ಮಹಾಪುರುಷ, ಲೋಕಕ್ಕೆ ಆದರ್ಶ ಪುರುಷ.

ರಾಮಾಯಣದ ತತ್ತ್ವಾಂಶವನ್ನು ಶ್ರೀ ಶಂಕರಾಚಾರ್ಯರು ಒಂದುಕಡೆ ಹೀಗೆ ಹೇಳಿದ್ದಾರೆ--

ತೀರ್ತ್ವಾ ಮೋಹಾರ್ಣವಂ
ಹತ್ವಾರಾಗದ್ವೇಷಾದಿ ರಾಕ್ಷಸಾನ್
ಶಾಂತಿ ಸೀತಾ ಸಮಾಯುಕ್ತಃ
ಆತ್ಮಾರಾಮೋ ವಿರಾಜತೇ

ಯೋಗಿಯಾದವನು ಅಜ್ಞಾನವೆಂಬ ಸಮುದ್ರವನ್ನು ದಾಟಿ, ರಾಗದ್ವೇಷಾದಿಗಳೆಂಬ ರಾಕ್ಷಸರನ್ನು ಕೊಂದು, ಶಾಂತಿಯನ್ನು ಪಡೆದು, ಆತ್ಮಾರಾಮನಾಗಿ ಬೆಳಗುತ್ತಾನೆ. ಆಚಾರ್ಯ ಶ್ರೀ ವೇದಾಂತ ದೇಶಿಕರೂ ಸಹ ರಾಮಾಯಣದ ತಾತ್ವಿಕ ಸ್ವಾರಸ್ಯವನ್ನು ಅನುಭವಿಸಿ ಈ ರೀತಿ ಹೇಳಿದ್ದಾರೆ. "ಐದು ಜ್ಞಾನೇಂದ್ರಿಯಗಳು ಮತ್ತು ಐದು ಕರ್ಮೇಂದ್ರಿಯಗಳೆಂಬ ಹತ್ತು ತಲೆಗಳನ್ನು ಪಡೆದು ಅಹಂಕಾರಿಯಾಗಿರುವ ಮನಸ್ಸೇ ದಶಕಂಠನೆಂಬ ರಾಕ್ಷಸನು. ನಮ್ಮ ಶರೀರವೇ ಈ ರಾವಣನ ವಾಸಸ್ಥಳವಾದ ಲಂಕಾಪಟ್ಟಣ. ಶರೀರವೆಂಬ ಲಂಕೆಯನ್ನು ಸಂಸಾರ ಸಮುದ್ರವು ಸುತ್ತುವರಿದಿದೆ. ಇಲ್ಲಿ ಸಿಕ್ಕಿ ದೈನ್ಯದಿಂದ ಸಂಕಟಪಡುತ್ತಿರುವ ಭಗವದ್ವಿಯುಕ್ತನಾದ ಜೀವಾತ್ಮನೇ ಸೀತೆ. ಆಂಜನೇಯನು ಸಮುದ್ರವನ್ನು ದಾಟಿ ಶ್ರೀರಾಮನ ವೃತ್ತಾಂತವನ್ನು ಸೀತೆಗೆ ತಿಳಿಯಪಡಿಸಿದಂತೆ, ಜ್ಞಾನ, ವಿರಕ್ತಿ, ಭಕ್ತಿ ಮತ್ತು ಪ್ರಪತ್ತಿಗಳಿಂದ ಸಂಸಾರ ಸಮುದ್ರವನ್ನು ದಾಟಿರುವ ಆಚಾರ್ಯರು ಜೀವಾತ್ಮನಿಗೆ ಭಗವದ್ವಿಚಾರವನ್ನು ತಿಳಿಯಪಡಿಸಿ, ಅವನ ಉದ್ಧಾರಕ್ಕೋಸ್ಕರ ಭಗವಂತನಲ್ಲಿ ಪ್ರಾರ್ಥಿಸುತ್ತಾರೆ. ಶ್ರೀ ರಾಮನು ಸೀತಾದೇವಿಯನ್ನು ಬಂಧನದಿಂದ ಬಿಡಿಸಿ, ಸ್ವೀಕರಿಸಿ ಸಂತೋಷಿಸಿದಂತೆ ಭಗವಂತನೂ ಮನಸ್ಸೆಂಬ ರಾವಣನನ್ನು ನಿಗ್ರಹಿಸಿ ಜೀವನನ್ನು ಬಂಧನದಿಂದ ಬಿಡಿಸಿ, ಅವನನ್ನು ಸ್ವೀಕರಿಸಿ ಸಂತೋಷಪಡುತ್ತಾನೆ. ಇದೇ ಶ್ರೀಮದ್ರಾಮಾಯಣದಿಂದ ತಿಳಿಯಬೇಕಾದ ವೇದಾಂತ ರಹಸ್ಯ

ಮಹಾವಿಷ್ಣುವಿನ ರಕ್ಷಣೆಯ ರೀತಿಯನ್ನು ಮನುಷ್ಯಮಟ್ಟದಲ್ಲಿ ಕಾಣಬಹುದಾದುದು ಮೊಟ್ಟಮೊದಲನೆಯದಾಗಿ ರಾಮಾಯಣದಲ್ಲಿ. ಮನುಷ್ಯನು ಭೂಸುರ ಅಂದರೆ ಸ್ವರ್ಗದಲ್ಲಿ ದೇವತೆಗಳಿದ್ದಂತೆ ಭೂಲೋಕದಲ್ಲಿ ಬೆಳಗುವ ವ್ಯಕ್ತಿ. ಸುಖವನ್ನು ಬಿಡದೆ, ದುಃಖಕ್ಕೆ ಭಾಗಿಯಾಗದೆ ಉಳಿಸಿಕೊಳ್ಳುವ ಅನುಭವ ಮನುಷ್ಯ ಜನ್ಮ. ಆದರೆ ಇದನ್ನು ಉಳಿಸಿಕೊಳ್ಳುವುದು ಅತಿಕ್ಲೇಶಕರ. ಚಪಲಚಿತ್ತನಿಗೆ ಸ್ವಸಂಯಮವಿಲ್ಲದ ಕಾರಣ ಅಂದರೆ ಚೇತನನಾಗಿ ಹುಟ್ಟಿ ಅಚೇತನನೊಡನೆ ಸೇರಿ ತಾನು ಉಳಿಸಿಕೊಳ್ಳಬೇಕಾದ ಚೇತನತ್ವವನ್ನು ಲಕ್ಷಿಸದೆ, ಸಂಪರ್ಕದಿಂದ ಏರ್ಪಡುವ ಜೀವನದಲ್ಲಿ ಕಾಲಕಳೆಯುತ್ತಾನೆ. ಇದೇ ದುಃಖಕ್ಕೆ ಮೂಲ. ಇದರಿಂದ ಪಾರಾಗಲು ಯೋಗಾಭ್ಯಾಸವನ್ನು ಮಾಡುತ್ತ ಚಪಲತೆಯನ್ನು ಅಡಗಿಸಿ, ಸ್ವಾಧೀನತೆಯನ್ನು ಪಡೆದು ಪ್ರಪಂಚದಲ್ಲಿ ಉಳಿದುಕೊಂಡರೂ, ಅದರ ಹಾವಳಿಗೆ ತುತ್ತಾಗದೆ ಇರುವುದು ಅಪಾರ ತಂತ್ರದ ನಿಲುವು. ಉದಾ:-- ಕಮಲದಮೇಲೆ ಜಲಕಣ ಇದ್ದರೂ ಸಂಬಂಧಕೆಡುವುದಿಲ್ಲ. ಅಂತೆಯೇ ನಿಜವಾದ ಯೋಗಿಯಾದವನು ಎಂತಹ ಅವಸ್ಥೆಯಲ್ಲಿದ್ದರೂ, ಯಾವ ಸಂಪರ್ಕಪಡೆದರೂ ಅಂಟಿಕೊಂಡಿರುವುದಿಲ್ಲ. ಇದಕ್ಕೆ ಅತ್ಯಾವಶ್ಯಕವಾದ ಒಂದೇ ಒಂದು ನಿಲುವು ಅಪೇಕ್ಷಿತ -- ಹುಟ್ಟುಗುಣವನ್ನು ಬಿಡಬಾರದು. ಇದೇ ಶೀಲ ಸಂರಕ್ಷಣೆ ಎನ್ನಿಸುತ್ತದೆ. ಇದು ಅನೇಕ ಮಟ್ಟಗಳಲ್ಲಿ ಕಾಣಿಸಿಕೊಳ್ಳುತ್ತದೆ. ವೇದಾಂತದ ಮಟ್ಟದಲ್ಲಿ ವೇದಗಳಿಗೆ ವಿಧೇಯತೆ. ಇದನ್ನು ಧರ್ಮನಿಷ್ಠೆ ಎನ್ನುತ್ತಾರೆ. ಅಂತೆಯೇ ವೇದ ಪ್ರತಿಪಾದ್ಯನಾದ ಸರ್ವೇಶ್ವರನಿಗೆ ವಿಧೇಯತೆ ತೋರಿಸಬೇಕಾದುದು. ಇದಕ್ಕೆ ವಿರುದ್ಧವಾದ ಯಾವ ನಿಲುವಿದ್ದರೂ, ಯಾವ ಪುರುಷಾರ್ಥವಾದರೂ ಅವು ಅವೈದಿಕ ರೂಪತಾಳುತ್ತವೆ. ಸಮಾಜದಲ್ಲಿ ನಾಯಕನಾಗಬೇಕಾದ ವ್ಯಕ್ತಿ ತನ್ನ ನಡತೆ, ನುಡಿಯನ್ನು ಉಳಿಸಿಕೊಳ್ಳಬೇಕು. ಇದು ವೈಯಕ್ತಿಕ ಮತ್ತು ಸಾಮಾಜಿಕವಾಗಿರುತ್ತದೆ. ಆದ್ದರಿಂದ ಸದ್ವೃತ್ತಿ ಶುಭ್ರವಾದ ನೋಟನಡತೆಗಳು ಮನುಷ್ಯನಿಗೆ ಇಬ್ಬಗೆಯ ರಕ್ಷಾಕವಚಗಳು. ಈ ತತ್ವವನ್ನು ತೋರಿಸಲು ರಾಮಾಯಣ ಚರಿತ್ರೆಯು ವಾಲ್ಮೀಕಿ ಮಹರ್ಷಿಗಳ ಮೂಲಕ ಮೊಟ್ಟಮೊದಲಾಗಿ ಲೋಕದಲ್ಲಿ ಪ್ರಚಾರಗೊಂಡಿತು.

ಮೊದಲಾಗಿ ಪರಶುರಾಮನಲ್ಲದ ಮತ್ತೊಬ್ಬ ರಾಮ; ಅವನ ಅಯನ ಅಂದರೆ ಗುರಿ ಮತ್ತು ನಡತೆ. ಈ ಸಂದರ್ಭದಲ್ಲಿ ತಿಳಿಯಬೇಕಾದುದು ತನ್ನ ವಶದಲ್ಲಿರುವ ಪದಾರ್ಥದ ರಕ್ಷಣೆಯಲ್ಲಿ ಔದಾಸೀನ್ಯ ತೋರಬಾರದು ಮತ್ತು ಒಂದು ವೇಳೆ ಪದಾರ್ಥವು ಕೈಬಿಟ್ಟುಹೋದರೆ ತಾಳ್ಮೆಯಿಂದ ಸುಮ್ಮನಿರದೆ ಆ ಪದಾರ್ಥವನ್ನು ಪುನಃ ವಶದಲ್ಲಿಟ್ಟುಕೊಳ್ಳಬೇಕಾದುದು ಕರ್ತವ್ಯ. ಇವೆರಡರ ವಿನಹಾ ಬೇರೆ ಏನೂ ಕರ್ತವ್ಯ ವಿರುವುದಿಲ್ಲ. ಈ ದೃಷ್ಟಿಯಲ್ಲಿ

ರಾಮಾ ಅಯನ-- ರಾಮನ ರಕ್ಷಕತ್ವ ಸ್ವಭಾವವನ್ನು ಪ್ರಕಟಿಸಲು ರಾಮಾ -- ಅಂದರೆ ಅವನ ಮಡದಿ ತನ್ನ ನಡತೆಯಲ್ಲಿ ತೋರಿಸಿದ ಸಹವಾಸ ಮತ್ತು ವಿಪ್ರವಾಸ ಅಂದರೆ ಅವನ ಕೈತಪ್ಪಿ ಬೇರೆಯಾದ ಸನ್ನಿವೇಶದ ವರ್ಣನೆ ಮತ್ತು ಪುನಃ ರಾಮನ ಸಂಪರ್ಕವೇರ್ಪಟ್ಟುದು. ಈ ಮೂರು ಅಂಶ ಸೀತಾದೇವಿಯ ನಿಷ್ಠೆಯಿಂದ ನಮಗೆ ತಿಳಿದುಬರುತ್ತದೆ. ಆದ್ದರಿಂದ ರಾಮಾಯಣ ಎಂಬ ಹೆಸರು ಸಾರ್ಥಕವಾಗುತ್ತದೆ.

ಮೂರನೆಯದಾಗಿ, ಶ್ರೀಮದ್ರಾಮಾಯಣವೆಂದು ವಾಲ್ಮೀಕಿ ಕೃತಗ್ರಂಥಕ್ಕೆ ಹೆಸರು ಏರ್ಪಟ್ಟಿದೆ. ಇದು ರಾಮನು ಮತ್ತು ಅವನ ಮಡದಿಯೂ ಅಗಲದೆ ಜೀವನ ನಡೆಸಿದ ಪ್ರಸಂಗ. ಇದು ಎರಡು ಅಂತಸ್ತಿನಲ್ಲಿ ಕಾಣಿಸಿಕೊಳ್ಳುತ್ತದೆ. ಜಾನಕಿಯನ್ನು ಮಡದಿಯಾಗಿ ಪಡೆದಾರಭ್ಯದಿಂದ ಮಂಥರೆಯ ಪ್ರವೇಶದವರೆಗೂ ಶ್ರೀಮದ್ರಾಮಾಯಣ ಅತ್ಯಂತ ಸುಖಜೀವನ. ನಂತರ ಎರಡನೆಯ ಅವಸ್ಥೆ ಕುಬ್ಜೆಯ ಕೈವಾಡದ ಫಲವಾಗಿ ರಾಜ್ಯತೊರೆದು ವನವಾಸ. ಇದೂ ಶ್ರೀಮದ್ರಾಮಾಯಣ. ದಂಪತಿಗಳಿಗೆ ಅಗಲಿಕೆ ಆಗಲಿಲ್ಲ. 'ರಾಜ್ಯಾದ್ಭ್ರಂಶಃವನೇ ವಾಸಃ' ಎನ್ನುತ್ತಾರೆ. ಆವರಣ ಬದಲಾಯಿಸಿದರೂ ದಾಂಪತ್ಯದ ಅವಸ್ಥೆ ಬದಲಾಯಿಸಲಿಲ್ಲ. ಆದ್ದರಿಂದ ಇದು ಶ್ರೀಮದ್ ರಾಮಾಯಣ.

ಮತ್ತೊಂದು ಮಿಗಿಲಾದುದು ಶ್ರೀರಾಮಾಯಣ. ಇದರಲ್ಲಿ ದಂಪತಿಗಳಿಗೆ ಅಗಲಿಕೆ ಏರ್ಪಟ್ಟು ಅನಿಚ್ಛೆಯಿಂದ ಬೇರಾದ ಸೀತೆಗಾಗಿ ಅಯನ. ಅವಳೇ ರಾಮಾ -- ಅತ್ಯಂತ ಪ್ರಿಯಳಾದ ಒಡನಾಡಿ. ಸರ್ವತೋಮುಖವಾಗಿ ಪ್ರಯತ್ನಮಾಡಿ ಅವಳನ್ನು ಪುನಃ ಸಹವಾಸದಲ್ಲಿ ಉಳಿಸಿಕೊಂಡ ಬಗೆ. ರಾಮಾಯೈ ರಾಮಸ್ಯ ಅಯನಂ ಅಂದರೆ ತನ್ನ ಪದಾರ್ಥವನ್ನು ಅಸಡ್ಡೆಯಿಂದ ಕಳೆದುಕೊಂಡು ಪುನಃಪ್ರಾಪ್ತಿಗಾಗಿ ಪಡಬಾರದ ಕಷ್ಟವನ್ನೆಲ್ಲಾ ಅನುಭವಿಸಿ ಅಸದಳ ಕಜ್ಜಗಳನ್ನು ಕೈಗೊಂಡು ಪುನಃಪ್ರಾಪ್ತಿ ಏರ್ಪಟ್ಟ ಮೇಲೆ ನಿಜವಾದ ಶ್ರೀರಾಮನಾದುದು. ಈ ಅರ್ಥ ತೋರುವುದು ಶ್ರೀರಾಮಾಯಣ ಎಂಬ ಶಬ್ದದಿಂದ. ಇದರಲ್ಲಿ ಪರಿಗ್ರಾಹ್ಯಯಾವುದೆಂದರೆ ಗ್ರಂಥಕರ್ತನ ಬಾಯಿಂದ ಹೊರಬಿದ್ದುದೇ ಪರಿಗ್ರಾಹ್ಯ. ಕಾವ್ಯಂ ರಾಮಾಯಣಂ ಕೃತ್ಸ್ನಂ ಸೀತಾಯಾಃ ಚರಿತಂ ಮಹತ್ --ಅಂದರೆ ರಾಮಾಯಣದಲ್ಲಿ ಚಿತ್ರಿತವಾದ ಚರಿತ್ರೆ ರಾಮನ ಸಂರಕ್ಷಣೆಯಲ್ಲಿದ್ದ ಸೀತಾದೇವಿಯ ಕಥೆ. ಅಂದಮೇಲೆ ರಾಮಾಯಣವೆಂಬ ಶಬ್ದ ಇಬ್ಬಗೆಯಾಗಿ ತತ್ವವನ್ನು ವಿವರಿಸುತ್ತದೆ. ಮೊದಲನೆಯದು ವಿಧೇಯಳಾದ ಸೀತೆ -- ಬೇರ್ಪಡುವುದಕ್ಕೆ ಇಚ್ಛೆಯಿಲ್ಲದ ನಾರೀಮಣಿ-- ಅವಳ ಕಥೆ. ಅವಳಿಗೆ ದುಃಖವೇಕೆ ಬಂತು? ದುಃಖದಿಂದ ಏನಾದರೂ ಪರಿಣಾಮ ಉಂಟಾಯಿತೇ? ಮತ್ತು ಸತಿಪತಿಗಳ ಸಾಂಗತ್ಯ ತಪ್ಪಿದರೆ ಅವರ ಸ್ಥಿತಿ ಏನಾಯಿತು ಎಂಬುದಾಗಿ ಒಂದು ಚಿಂತೆ. ಇದು ಪರಾಧೀನ ವಸ್ತುವಿಗೆ ಅಂದರೆ ಸ್ವಸಂರಕ್ಷಣೆ ಸಾಮರ್ಥ್ಯವನ್ನು ಉಳಿಸಿಕೊಳ್ಳಬಲ್ಲ ವ್ಯಕ್ತಿಗೆ ಏನಾಗುತ್ತದೆಯೋ ಆ ಚಿಂತೆ ಎರಡನೆಯದು, ರಕ್ಷಕನಾಗಿರುವ ಪ್ರಿಯತಮ ಬಂಧು ತನ್ನ ಪದಾರ್ಥವನ್ನು ಕಳೆದುಕೊಂಡರೆ ಮತ್ತೊಂದು ಪದಾರ್ಥಕ್ಕೆ ಮನಸ್ಸು ಕೊಡದೆ ನಷ್ಟ ಪದಾರ್ಥದ ಚಿಂತೆಯಲ್ಲೇ ತನ್ನ ಕಾಲಕಳೆಯುವುದು. ಇದರಿಂದ ದಂಪತಿಗಳಿಗೆ ಏರ್ಪಟ್ಟಿರುವ ಸಂಬಂಧ ಶಾಶ್ವತ ಬದಲಾಗುವುದಿಲ್ಲ. ಆ ಸಂಬಂಧ ಬಿಟ್ಟರೆ ಸಂಬಂಧಿಗಳಿಬ್ಬರೂ ಉಳಿಯುವುದಿಲ್ಲ ಎಂಬ ತತ್ವ. ಅಂತ್ಯಕಾಲದಲ್ಲಿ ರಾಮನು ಸರಯೂ ನದಿಯಲ್ಲಿ ಪ್ರವೇಶ ಮಾಡಿ ಅಸುನೀಗಿದುದೇ ಪರಿಣಾಮ. [illegible]ವಿದ್ದರೇ ಈ ನಂಟು. ಅದಿಲ್ಲದೆ ಇಬ್ಬರೂ ಉಳಿಯುವುದಿಲ್ಲ. ಆದರೆ ಇದರಲ್ಲಿ ಸೇರಿಕೊಂಡಿರುವ ವ್ಯಕ್ತಿಗಳು ರಕ್ಷಕ ಮತ್ತು ರಕ್ಷಾಪೇಕ್ಷಿ, ಒಂದು ಸ್ವಾತಂತ್ರ್ಯ ಮತ್ತೊಂದು ಪಾರತಂತ್ರ್ಯ. ಇದನ್ನು ಸೀತಾದೇವಿಯು ತನ್ನ ಪತಿಗೆ ತಿಳಿಸುತ್ತಾಳೆ. ಕ್ಷಣಕಾಲವೂ ವಿಶ್ಲೇಷವಾಗಬಾರದು. ದೇಶ, ಕಾಲ, ಅವಸ್ಥೆ ಇವು ಗಣನೀಯವಲ್ಲ. ದಾಂಪತ್ಯ ಸಂಬಂಧ ಕಡೆಗಾಣುವಂತಿಲ್ಲ. ಯಃ ತ್ವಯಾ ಸಹ ಸಃ ಸ್ವರ್ಗಃ, ನಿರಯಃ ಹಃ ತ್ವಯಾ ವಿನಾ -- ಸಹವಾಸವು ಸ್ವರ್ಗ, ಅದಿಲ್ಲದಿದ್ದರೆ ನರಕ. ಸೀತೆಯ ಮನಸ್ಸಿನಲ್ಲಿ ಹೊರಬಿದ್ದುದು ಈ ಸಂಬಂಧದ ಪ್ರಾಮುಖ್ಯತೆ. ಇದು ವಿಧುರ ಮತ್ತು ವಿಧವಾ ಅವಸ್ಥೆಗಳಿಗೆ ಅವಕಾಶವೇ ಇಲ್ಲದ ಗಾರ್ಹಸ್ಥ್ಯ. ರಕ್ಷ್ಯವರ್ಗದಲ್ಲಿ ಅಗ್ರಸ್ಥಾನ ಪಡೆದವಳು ಸ್ತ್ರೀ. ಅದೇರೀತಿ ಸೀತೆಯು ರಾಮನ ಸಹವಾಸದಲ್ಲೇ ಉಳಿದುಕೊಳ್ಳದೇಕೆಂದು ಪ್ರಾಪ್ತವಾದ ಸರ್ವಾವಸ್ಥೆಗಳಲ್ಲೂ ಎಡೆಬಿಡದೆ ಸಹಚಾರಿಣಿಯಾಗಿ ಉಳಿದುಕೊಳ್ಳುತ್ತಾಳೆ. ಇದು ಪಾತಿವ್ರತ್ಯವೆನಿಸಿಕೊಳ್ಳುತ್ತದೆ.

ಅರಣ್ಯಕಾಂಡದಲ್ಲಿ ಪ್ರತ್ಯೇಕವಾಗುವ ಪ್ರಸಂಗ ಏರ್ಪಡುತ್ತದೆ. ಮೋಸಕ್ಕೆ ತುತ್ತಾಗಿ ಅಗಲಿಕೆ ಏರ್ಪಟ್ಟಿತು. ಅದಕ್ಕೆ ಕಾರಣ ಚಿತ್ತದಾರ್ಢ್ಯ ಮತ್ತು ರೂಪಾಂತರದಲ್ಲಿ ಏರ್ಪಟ್ಟಿದ್ದ ರಕ್ಷಾಕವಚಗಳನ್ನು ಉಪೇಕ್ಷೆ ಮಾಡಿದುದು. ಮಾರೀಚನು ರಾಮನ ಕಂಠದಲ್ಲಿ ಕೂಗಿಕೊಂಡನು. ಇದು ಅನುಕರಣ ಶಬ್ದವೆಂದು ಅವಳಿಗೆ ತಿಳಿಯಲಿಲ್ಲ. ಲಕ್ಷ್ಮಣನು ಕಾವಲಾಗಿದ್ದನು. ರಾಮಭೃತ್ಯ ಇವನು ಎಂಬುದನ್ನು ಮರೆತಳು. ಲಕ್ಷ್ಮಣನು ಅಗಲುವ ಮುನ್ನ ಶ್ರೀರಾಮ ರಕ್ಷೆ ಎಂದು ಮಂತ್ರರೂಪವಾದ ಕೋಟೆಯನ್ನು ತನ್ನ ಪ್ರತಿನಿಧಿಯಾಗಿ ಏರ್ಪಡಿಸಿ ಅಗಲಿದನು. ಇದರ ಮೇಲೆ ರಾವಣ ವೇಷಾಂತರದಲ್ಲಿ ತಲೆದೋರಿದನು. ಅವನಿಗೆ ರಕ್ಷೆಯ ಒಳಗೆ ಬರಲವಕಾಶವಿಲ್ಲ. ಸಂನ್ಯಾಸ ವೇಷದಲ್ಲಿದ್ದವರಿಂದ ಭಿಕ್ಷೆ ಪಡೆಯದೆ ಹಿಂತಿರುಗುವಂತಿಲ್ಲ. ಬಂದವನನ್ನು ಅವನ ಬೇಡಿಕೆಗೆ ವಿರುದ್ಧವಾಗಿ ಅಪ್ರಾಪ್ಯಸತ್ಕಾರದವನಾಗಿ ಕಳುಹಿಸುವಂತಿಲ್ಲ. ಈ ತೊಡಕಿನಲ್ಲಿ ಸಿಕ್ಕಿ ರಕ್ಷೆಯ ಎಲ್ಲೆಯನ್ನು ಮೀರಿ ಬಂದಳು. ಇದೇ ಅವಳ ದುಃಖಕ್ಕೆ ಮೊದಲ ಹೆಜ್ಜೆ.

ಹೀಗೆ ಕೈ ತಪ್ಪಿದವಳನ್ನು ಪುನಃ ತನ್ನ ವಶಕ್ಕೆ ತೆಗೆದುಕೊಂಡದ್ದು ರಾಮನ ಸಾಹಸ. ಆದರೆ ಇದಕ್ಕೆ ಒಂದೇ ಒಂದು ವ್ಯಾಜ. ಅಗಲಿದರೂ ಪತಿಯನ್ನು ಮರೆಯಲಿಲ್ಲ. ಮತ್ತೊಬ್ಬನನ್ನು ಪುರಸ್ಕರಿಸಲಿಲ್ಲ. ಇದನ್ನೇ ಅನ್ಯಯೋಗ, ಅಯೋಗ, ಉಪಸ್ಥಿತ ಪರಿತ್ಯಾಗ, ಅನುಚಿತ ಸ್ವೀಕಾರ ಎನ್ನುತ್ತಾರೆ. ಸೀತೆಗೆ ಅಬುದ್ಧಿ ಪೂರ್ವಕವಾಗಿ ಇವೆರಡೂ ಏರ್ಪಟ್ಟವು. ಆದ್ದರಿಂದ, ಅಯೋಗ ಮತ್ತು ಅನ್ಯಯೋಗ ವ್ಯವಚ್ಛೇದ ವಿನಾಶಕ್ಕೆ ಪ್ರಯತ್ನಪಟ್ಟವನು ಶ್ರೀರಾಮ. ಅದನ್ನು ಬಯಸುತ್ತಿದ್ದವಳು ರಾಕ್ಷಸೀವೃತೆಯಾದ ಸೀತಾದೇವಿ. ಅವಳಿಗೆ ರಾಮನ ವಿಸ್ಮೃತಿ ಏರ್ಪಡದೆ ಇದ್ದ ಕಾರಣ ಪತಿಪತ್ನೀರೂಪವಾದ ನಿತ್ಯ ಸಂಬಂಧ. ಇದೇ ಸೌಮಂಗಲ್ಯಯೋಗ ಎಂದು ಲೋಕದಲ್ಲಿ ಬಳಕೆಗೆ ಬಂದಿದೆ. ಇದು ಪೂರ್ವಭಾಗ.

ಮತ್ತೊಂದು ಮುಖ್ಯಾಂಶ, ಜನರಲ್ಲಿ ಸರ್ವರೂ ಪ್ರಜೆಗಳಲ್ಲ ಎಂಬುದು. ಅಂತೆಯೇ ಸರ್ವರೂ ಪ್ರಜಾಪತಿಗಳಲ್ಲ. ಪ್ರಜೆಗಳಿಗಾಗಿ ಪ್ರಜಾಪತಿ. ಅವನು ನಿರಂಕುಶ ಸ್ವತಂತ್ರನಲ್ಲ. ಪ್ರಜಾಹಿತೈಷಿ. ಆ ದೃಷ್ಟಿಯಿಂದ ಒಡೆಯನಾದ ವ್ಯಕ್ತಿಗೆ ಸ್ವಸಂಯಮ ಅಂದರೆ ಕಾಮಚಾರ ವೃತ್ತಿಗೆ ತನ್ನನ್ನು ಬಲಿಯಾಗಿಸಕೂಡದು. ಕಾಮಚಾರವೃತ್ತಿ ವೈಯಕ್ತಿಕ. ಪ್ರಜಾಪಾಲನೆ ಸಾಮಾಜಿಕ. ಸಮಾಜ ಸೇವೆಗಾಗಿ ಕಾಮವನ್ನು ಉಳಿಸಿಕೊಳ್ಳುವುದು ಧರ್ಮಕಾಮ. ಅದರ ಅಂಗವಾಗಿ ವ್ಯಕ್ತಿಕಾಮ. ಈ ಭಾವ ಬದಲಾಯಿಸಿದರೆ ಸಮಾಜಭಂಗ ಮಾತ್ರವಲ್ಲದೆ ವೈಯಕ್ತಿಕ ನೆಮ್ಮದಿಯೂ ತಪ್ಪಿ ಗತಿಗೆಟ್ಟವನಾಗುತ್ತಾನೆ. ಇದು ದಶರಥನ ಜೀವಿತದಲ್ಲಿ ಕಂಡುಬರುತ್ತದೆ. ಇದೇ ಕೈಕೇಯಿಯಾ ಸಂಗಪ್ರಸಂಗ. ಧರ್ಮಭಂಗ ಪ್ರಸಂಗ. ಆದ್ದರಿಂದ ಸಮಾಜಿಕಧರ್ಮಕ್ಕೆ ವಿರುದ್ಧವಾದ ವೈಯಕ್ತಿಕ ಧರ್ಮವು ಕಾಮ ಪ್ರಚೋದಿತವಾದುದು. ಆದ್ದರಿಂದ ಕುಲಕ್ರಮಾಗತವಾದ ಪದ್ಧತಿಯ ರಾಜ್ಯ ನಿರ್ವಹಣೆಯಲ್ಲಿ ದಶರಥನು ಕೈಕೇಯಿಯಾ ವಶಂಗತನಾಗಿ ಉಳಿಸಿಕೊಳ್ಳಲಾರದೇ ಹೋದನು. ಆ ಅಧರ್ಮವನ್ನು ತತ್ಫಲವಾದ ಸಾಮಾಜಿಕ ಕ್ಲೇಶವನ್ನು ಸಹಿಸಲಾರದ ವಿಧೇಯತೆಗೆ ವೇದಾಂತದ ದೃಷ್ಟಿಯಲ್ಲಿ ಸಂನ್ಯಾಸ ಅತ್ಯಪೇ

ಕ್ಷಣೀಯ. ಈ ದೃಷ್ಟಿಯಿಂದ ಸಂನ್ಯಾಸಾಶ್ರಮದಲ್ಲಿ ಕಾಮ ಪ್ರಚೋದಕರ ಸಂಗಕೂಡದು. ಅದರಲ್ಲಿ ಪತ್ನಿ ಪ್ರಧಾನ ಭಾಗಿನಿಯಾದುದರಿಂದ ಅವಳ ಸಂಗ ಕೂಡದೆಂದು ಸಂಪ್ರದಾಯ ಏರ್ಪಟ್ಟಿತು. ಈ ದೃಷ್ಟಿಯಲ್ಲಿ ದಶರಥನು ಭ್ರಷ್ಟ ಸಂನ್ಯಾಸಿ. ಅದನ್ನು ಹೋಗಲಾಡಿಸಲು ಶ್ರೀರಾಮನು ಕಾಮಕಲುಷಿತವಲ್ಲದ ಕರ್ತವ್ಯದಲ್ಲಿ ಕಾಮನಿಷ್ಠೆಯನ್ನು ಪ್ರದರ್ಶಿಸುವುದಕ್ಕಾಗಿ ರಾಜ್ಯವನ್ನು ತ್ಯಜಿಸಿ ವನವಾಸ ಕೈಗೊಂಡು ಕಷ್ಟಗಳನ್ನು ಅನುಭವಿಸಿ ಕರ್ತವ್ಯ ಬಿಡದೆ ಪುನಃ--

ಅಭ್ಯಷಿಂ ಚ ನ್ನರವ್ಯಾಘ್ರಂ
ಪ್ರಸನ್ನೇನ ಸುಗಂಧಿನಾ
ಸಲಿಲೇನ ಸಹಸ್ರಾಕ್ಷಂ
ವಸವೋ ವಾಸವಂ ಯಥಾ

(ಶುದ್ಧವೂ ಸುಗಂಧಿಯೂ ಆದ ಪುಣ್ಯಜಲದಿಂದ, ಅಷ್ಟವಸುಗಳು ಸಹಸ್ರಾಕ್ಷನಾದ ಇಂದ್ರನಿಗೆ ಅಭಿಷೇಕಮಾಡಿದಂತೆ ಶ್ರೀರಾಮನಿಗೆ ಅಭಿಷೇಕ ಮಾಡಿದರು.) -- ಎಂಬಂತೆ ಪ್ರತಿಗ್ಗ ತವರಕ್ಕೆ ಪಾತ್ರನಾಗಿ ಕರ್ತವ್ಯವಿಧೇಯತೆ ಅಂದರೆ ಸಮಾಜದ ಶಾಶ್ವತವಾದ ಸೌಖ್ಯಕ್ಕಾಗಿ ತನು--ಮನ--ಧನಗಳನ್ನು ಮತ್ತು ಪರಿವಾರಗಳನ್ನು ಬಳಸಬೇಕಾದುದೇ ವಿನಾ ಸ್ವಾರ್ಥವನ್ನು ಅದರೊಡನೆ ಕಲಸಿ ಸಾಮಾಜಿಕ ದೋಷಕ್ಕೆ ಕಾರಣವಾಗಬಾರದು ಎಂಬ ಭಾವ ರಾಮಾಯಣದಲ್ಲಿ ತೋರುತ್ತದೆ. ಇದು ಲೌಕಿಕ.

ವೈದಿಕಾಂಶ ಹೀಗಿದೆ. ಅದನ್ನು ಶ್ರೀರಾಮನೇ ತನ್ನ ತಂದೆಯ ವಿಷಯದಲ್ಲಿ ಹೀಗೆ ಹೇಳಿದ್ದಾನೆ.

ನಂದಂತಿ ಉದಿತ ಆದಿತ್ಯೇ
ನಂದಂತಿ ಅಸ್ತಮಿತೇ ರವೌ
ಆತ್ಮನೋ ನಾವಬುಧ್ಯಂತೇ
ಮನುಷ್ಯಾ ಜೀವಿತಕ್ಷಯಮ್

--ಸೂರ್ಯನು ಉದಯಿಸಿದರೂ ಜನರು ಆನಂದಪಡುತ್ತಾರೆ; ಅಸ್ತಮಿಸಿದರೂ ಆನಂದಪಡುತ್ತಾರೆ. ತಮ್ಮ ಆಯುಸ್ಸು ಕ್ಷಯಿಸಿ ಹೋಗುತ್ತಿದೆ ಎಂಬುದನ್ನು ಮಾತ್ರ ಗಮನಿಸುವುದಿಲ್ಲ. ಲೌಕಿಕದಲ್ಲಿ ಅಂದರೆ ಹುಟ್ಟು ಸಾವುಗಳ ಮಧ್ಯದ ಅವಸ್ಥೆಯಲ್ಲಿ ಜನರು ಸುಖವಾಗಿರಲು ಬಯಸುತ್ತಾರೆ. ಆದರೆ ಇದಕ್ಕಿಂತ ಬೇರೆಯಾದ ವಿಲಕ್ಷಣ ನಿತ್ಯಕ್ಷೇಮಕ್ಕಾಗಿ ಏರ್ಪಟ್ಟಿರುವ ಆತ್ಮನ ಕ್ಷೇಮಕ್ಕೆ ಮನಸ್ಸನ್ನು ಕೊಡುವವರು ಇಲ್ಲದಿರುವುದು ಅತಿ ಖೇದನೀಯ. ಅಂದರೆ ತಾತ್ಕಾಲಿಕ ಯೋಗಕ್ಷೇಮಕ್ಕೆ ಸಮಾಜವು ಹೊಣೆ ಹೊತ್ತಿದೆ. ಸಮಾಜದ ನಿತ್ಯ ಶುಭಕ್ಕೆ ದುಡಿಯುವವರು ದಶರಥನ ರಾಜ್ಯದಲ್ಲಿ ಇರಲಿಲ್ಲ ಎಂದು ಶ್ರೀರಾಮಚಂದ್ರನು ನುಡಿಯುತ್ತಾನೆ. ಶ್ರೀ ಅಂದರೆ ಸೀತಾದೇವಿ. ಅವಳಿಗೆ ರಾಮ ಅಂದರೆ ನೆಮ್ಮದಿಯನ್ನುಂಟುಮಾಡಿಕೊಡುವುದು. ಇದಕ್ಕೆ ಉಪಮಾನ ಚಂದ್ರ. ಚಂದ್ರನು ಆಹ್ಲಾದಕಾರಕ. ರಾಮನು ಶ್ರೀದೇವಿಗೆ ಚಂದ್ರ.

ಲಂಕಾವಾಸವು ಕಾಳರಾತ್ರಿ ಅಮಾವಾಸ್ಯೆ ಅಯೋಧ್ಯಾವಾಸವು ಬೆಳದಿಂಗಳು ಪೌರ್ಣಮಿ. ಇದು ಶ್ರೀರಾಮಾಯಣ ಅಂದರೆ ವಿಧಿವತ್ತಾಗಿ ಸಮಾಜವನ್ನು ದುರ್ಗತಿಯಿಂದ ತಪ್ಪಿಸುವ ಕರ್ತವ್ಯ. ಲೋಕದ ಆನಂದವನ್ನು ಉಳಿಸಿಕೊಳ್ಳಬಲ್ಲ ಪರಶುರಾಮನಾಗಲಾರ. ಶ್ರೀರಾಮನೇ ಆಗುವನು. ಇವರಿಬ್ಬರಿಗೂ ವ್ಯತ್ಯಾಸ ವಿನಾಶಕ್ಕೆ ಕೈಹಾಕಿ ಹಿರಿಮೆಯನ್ನು ಕಳೆದುಕೊಂಡ ಪರಶುರಾಮ. ವಿನಾಶದಿಂದ ಪಾರಾಗುವಂತೆ ಮಾಡಿದ ಯತ್ನಕ್ಕಾಗಿ ಶ್ರೀರಾಮಚಂದ್ರ ಪರಶುರಾಮನನ್ನೂ ಸೋಲಿಸಿ ನಿಜವಾದ ಶ್ರೀರಾಮಚಂದ್ರನಾದ. ಆದ್ದರಿಂದ ಲೋಕದಲ್ಲಿ ಪ್ರತಿ ಪ್ರಜೆಯ ಬಾಯಲ್ಲಿ ಸ್ವಾಭಾವಿಕವಾಗಿ--

ರಾಮೋ ರಾಮೋ ರಾಮ ಇತಿ
ಪ್ರಜಾನಾಮಭವನ್ ಕಥಾ
ರಾಮ ಭೂತಂ ಜಗದಭೂತ್
ರಾಮೋ ರಾಜ್ಯಂ ಪ್ರಶಾಸತಿ

--ಎಲ್ಲ ಪ್ರಜೆಗಳ ಬಾಯಲ್ಲೂ ರಾಮನಾಮ. ರಾಮ--ರಾಮ ಎಂದು ಎಲ್ಲರೂ ರಾಮನಲ್ಲೇ ಅನುರಕ್ತರಾಗಿದ್ದರು. ನಡೆ ನುಡಿಯಲ್ಲಿ ಆಚಾರ ವಿಚಾರಗಳಲ್ಲಿ ಎಲ್ಲರೂ ಸತ್ಯಪರಾಕ್ರಮಿಯಾದ ರಾಮನನ್ನೇ ಅನುಸರಿಸುತ್ತಿದ್ದರು. ರಾಮನ ಆಳ್ವಿಕೆಯಲ್ಲಿ ಮನೋವಾಕ್ಕಾಯಗಳಲ್ಲಿ ರಾಮ ಶಬ್ದ ತಾಂಡವಾಡುತ್ತಿತ್ತು. ಅದೇರೀತಿಯಲ್ಲಿ ಸಕಲ ಪದಾರ್ಥಗಳೂ ಬ್ರಹ್ಮತತ್ವಕ್ಕೆ ಅಡಗಿರುವುದರಿಂದ ಎಲ್ಲರ ಬಾಯಲ್ಲೂ ಎಂಥ ಸಂದರ್ಭದಲ್ಲೂ ಬ್ರಹ್ಮಭಾವನೆ ಉಳಿದುಕೊಂಡು ಬರಬೇಕು. ಇದೇ ವೈದಿಕ.

ಮಹಾತಪಸ್ವಿಯಾದ ವಾಲ್ಮೀಕಿಗೆ ರಾಮಾಯಣದ ಈ ಜ್ಞಾನೋಪದೇಶವನ್ನು ಮಾಡಿದ ಮಹಾತ್ಮ ನಾರದ.

ನಾರಂ ಜ್ಞಾನಂ ರಾತಿ
ದದಾತೀತಿ ನಾರದಃ
ನರಾಣಾಂ ಇದಂ ನಾರಂ
ಅಜ್ಞಾನಂ ತದ್ಯತಿ
ಜ್ಞಾನೋಪದೇಶೀನ ಇತಿ ನಾರದಃ

--ಎಂದು ನಾರದ ಶಬ್ದದ ಅರ್ಥವಿವರಣೆಯನ್ನು ವ್ಯಾಖ್ಯಾನಕಾರರು ಮಾಡಿದ್ದಾರೆ. ಜ್ಞಾನೋಪದೇಶಕ ನಾರದ. ನರರಲ್ಲಿರುವ ಅಜ್ಞಾನವನ್ನು ಹೋಗಲಾಡಿಸಿ ಜ್ಞಾನವನ್ನು ಉಂಟುಮಾಡಿ ಮೋಕ್ಷಕ್ಕೆ ಸಾಧಕವಾಗುವಂತೆ ಮಾಡುವವರು ನಾರದರು ವಾಲ್ಮೀಕಿಗೆ ಉಪದೇಶಿಸಿದರು. ತಪಸ್ಸೇ ಧನವಾಗಿ ಉಳ್ಳ ವಾಲ್ಮೀಕಿ ರಾಮಾಯಣವನ್ನು ರಚಿಸಿದರು. ಮೋಕ್ಷಮಾರ್ಗವನ್ನು ತೋರಿಸುವುದೇ ರಾಮಾಯಣ. ರಾಮ ಸಾಮಾನ್ಯ ಮನುಷ್ಯನಲ್ಲ. ಬ್ರಹ್ಮಜ್ಞಾನಿಗಳಾದ ವಾಲ್ಮೀಕಿ ಮಹರ್ಷಿ ರಾಮಾವತಾರದ ರಹಸ್ಯವನ್ನು ಹೊರಗೆಡಹಿದ್ದಾರೆ.

ಆದಿದೇವೋ ಮಹಾಬಾಹುಃ
ಹರಿರ್ನಾರಾಯಣ ಪ್ರಭುಃ
ಸಾಕ್ಷಾದ್ರಾಮೋ ರಘುಶ್ರೇಷ್ಠಃ
ಶೇಷೋ ಲಕ್ಷ್ಮಣ ಉಚ್ಯತೇ

ಆದಿದೇವನೆನಿಸಿದ ಸಾಕ್ಷಾತ್ ಹರಿಯೇ, ಆ ನಾರಾಯಣನೇ ರಾಮರೂಪದಲ್ಲಿ ಅವತರಿಸಿದ್ದಾನೆ. ಸಾಕ್ಷಾತ್ ಆದಿಶೇಷನೇ ಲಕ್ಷ್ಮಣನೆನಿಸಿಕೊಂಡಿದ್ದಾನೆ. ಅಂದಮೇಲೆ ವಿಷ್ಣುವಿನ ಅವತಾರವೇ ರಾಮ ಎಂದು ಸಿದ್ಧವಾದಂತಾಯಿತು. ಈ ವೈದಿಕಾಂಶವನ್ನು ಸಂಗ್ರಹವಾಗಿ 'ವೇದವೇದ್ಯೇ ಪರೇ ಪುಂಸೀ' ಎಂಬ ಶ್ಲೋಕದಲ್ಲಿ ನುಡಿಯಲಾಗಿದೆ.



# ಶ್ರೀರಾಮಾವತಾರ

---ವಿದ್ವಾನ್ ಭೀಮಾಚಾರ್ಯಗುಡಿ.



ಶ್ರೀ ಮಹಾದೇವರು ಹೇಳುತ್ತಾರೆ-- "ಪಾರ್ವತೀ, ಪೂರ್ವಕಾಲದ ಕಥೆಯಿದು. ಸ್ವಾಯಂಭುವ ಮನುವು ನೈಮಿಷಾರಣ್ಯದಲ್ಲಿ ಗೋಮತಿ ನದಿಯ ದಂಡೆಯ ಮೇಲೆ ಪವಿತ್ರವಾದ ತೀರ್ಥದಲ್ಲಿ 'ದ್ವಾದಶಾಕ್ಷರ ಮಹಾಮಂತ್ರದ' ಜಪಮಾಡುತ್ತಿದ್ದನು. ಅವನು ಸಾವಿರ ವರ್ಷಗಳವರೆಗೆ ಲಕ್ಷ್ಮೀಪತಿ ಭಗವಾನ್ ಶ್ರೀಹರಿಯ ಪೂಜನೆಮಾಡುತ್ತಿದ್ದನು. ದೀರ್ಘಕಾಲದ ತಪೋ ಪೂಜೆಯಿಂದ ಪ್ರಸನ್ನನಾದ ಭಗವಂತನು ಪ್ರಕಟನಾದನು; ಮತ್ತುಹೇಳಿದನು -- "ರಾಜನೇ, ನನ್ನಿಂದ ವರವನ್ನು ಬೇಡು" ಎನ್ನಲು ಸ್ವಾಯಂಭುವಮನುವಿಗೆ ಸಂತೋಷವಾಯಿತು. ಆಗ ಪರಮಾತ್ಮನಿಗೆ -- "ಅಚ್ಯುತಾ, ದೇವೇಶ್ವರಾ, ನೀವು ಮೂರು ಜನ್ಮಗಳವರೆಗೆ ನನ್ನ ಮಗನಾಗಬೇಕು" ಎಂದು ಪ್ರಾರ್ಥಿಸಿದನು. ನಾನು ನಿನ್ನನ್ನು ಪುರುಷೋತ್ತಮನೆಂದು ಭಜನೆ ಮಾಡಲು ಇಚ್ಛಿಸುವೆ." ಈ ಮಾತನ್ನು ಕೇಳಿ ಭಗವಾನ್ ಲಕ್ಷ್ಮೀಪತಿಯು -- "ನೃಪಶ್ರೇಷ್ಠಾ, ನಿನ್ನ ಮನದಲ್ಲಿ ಯಾವ ಇಚ್ಛೆಯಿದೆಯೋ, ಅದು ಅವಶ್ಯವಾಗಿ ಪೂರ್ಣಗೊಳ್ಳುವುದು. ನಿನ್ನ ಮಗನಾಗಿ ಜನಿಸುವುದು ನನಗೂ ಕೂಡ ಸಂತೋಷದಾಯಕವಾದದ್ದು. ಜಗತ್ತಿನ ಪಾಲನೆ, ಧರ್ಮರಕ್ಷಣೆಗಾಗಿ ಪ್ರಸಂಗ ಬಂದಾಗ ಭಿನ್ನ ಭಿನ್ನ ಕಾಲಗಳಲ್ಲಿ ನಿನ್ನನ್ನು ಮಗನೆಂದು ತಿಳಿಸುವುದಕ್ಕಾಗಿ ಭೂಮಿಯಲ್ಲಿ ಅವತರಿಸುತ್ತೇನೆ. ಅನಘ, ಸಾಧುರಕ್ಷಣೆಗಾಗಿ, ಪಾಪಿಗಳ ವಿನಾಶಕ್ಕಾಗಿ ಮತ್ತು ಧರ್ಮಸಂಸ್ಥಾಪನೆಗಾಗಿ ನಾನು ಪ್ರತ್ಯೇಕ ಯುಗಗಳಲ್ಲಿ ಅವತಾರ ಮಾಡುತ್ತೇನೆ.

ಪರಿತ್ರಾಣಾಯ ಸಾಧೂನಾಂ
ವಿನಾಶಾಯ ಚ ದುಷ್ಕೃತಾಮ್
ಧರ್ಮಸಂಸ್ಥಾಪನಾರ್ಥಾಯ
ಸಂಭವಾಮಿ ಯುಗೇಯುಗೇ

ಈ ರೀತಿ ಸ್ವಯಂಭುವ ಮನುವಿಗೆ ವರಕೊಟ್ಟು ಶ್ರೀಹರಿ ಅಂತರ್ಧಾನನಾದನು. ಸ್ವಾಯಂಭುವ ಮನುವಿನ ಜನ್ಮವು ಮೊದಲನೆಯದಾಗಿ ರಘುಕುಲದಲ್ಲಿಯೇ ಆಯಿತು. ಅಲ್ಲಿ ಅವನು ರಾಜಾ ದಶರಥನೆಂಬ ಹೆಸರಿನಿಂದ ಪ್ರಸಿದ್ಧನಾದನು. ಎರಡನೆಯ ಸಲ ವೃಷ್ಣಿವಂಶದಲ್ಲಿ 'ವಸುದೇವನೆಂಬ ರೂಪದಿಂದ ಪ್ರಕಟನಾದನು. ಮತ್ತೆ ಕಲಿಯುಗದಲ್ಲಿ ಒಂದು ಸಾವಿರ ದಿವ್ಯವರ್ಷಗಳು ಕಳೆದಮೇಲೆ 'ಸಮ್ಮಲ' ಗ್ರಾಮದಲ್ಲಿ 'ಹರಿಗುಪ್ತ' ಬ್ರಾಹ್ಮಣನ ರೂಪದಲ್ಲಿ ಹುಟ್ಟಿದನು. ಅವನ ಹೆಂಡತಿಯೂ ಕೂಡ ಪ್ರತಿಯೊಂದು ಜನ್ಮದಲ್ಲಿ ಅವನ ಜೊತೆಗೆಯೇ ಅವತರಿಸುತ್ತಿದ್ದಳು. ಈಗ ನಾನು ಶ್ರೀರಾಮಚಂದ್ರನ ಚರಿತ್ರೆಯನ್ನು ವರ್ಣಿಸುವೆನು. ರಾಮನ ಚರಿತ್ರೆಯ ಸ್ಮರಣಮಾತ್ರದಿಂದ ಪಾಪಗಳ ನಿವಾರಣೆಯಾಗಿ ಮುಕ್ತಿ ದೊರೆಯುವುದು.

ಹಿರಣ್ಯಕಶಪು ಮತ್ತು ಹಿರಣ್ಯಾಕ್ಷರೆಂಬ ಹೆಸರಿನ ದೈತ್ಯರು ಎರಡನೆಯ ಜನ್ಮತಾಳಿ ಮಹಾಬಲಿ ಕುಂಭಕರ್ಣ ಮತ್ತು ರಾವಣರೆಂದು ಪ್ರಸಿದ್ಧರಾದರು. ಮುನಿವರ ಪುಲಸ್ತ್ಯನಿಗೆ 'ವಿಶ್ರವಾ' ಎಂಬ ಹೆಸರಿನ ಒಬ್ಬ ಧಾರ್ಮಿಕ ಪುತ್ರನು ಜನಿಸಿದನು. ಅವನ ಹೆಂಡತಿಯು ರಾಕ್ಷಸರಾಜ ಸುಮಾಲಿಯ ಮಗಳಾಗಿದ್ದಳು. ಅವಳ ತಾಯಿಯ ಹೆಸರು ಸುಕೇಶಿ; ಅವಳ ಹೆಸರು 'ಕೇಕಸಿ' ಎಂದು ಇದ್ದಿತು. ಕೈಕಸಿಯು ಕಟ್ಟುನಿಟ್ಟಾಗಿ ವ್ರತಾಚರಣೆಗಳನ್ನು ಮಾಡುತ್ತಿದ್ದಳು. ಆದರೆ ಒಂದುದಿನ ಸಾಯಂಕಾಲದಲ್ಲಿ ಕಾಮೋದ್ವೇಗ ಹೆಚ್ಚಾಗಿ ಮಹಾಮುನಿಯಾದ ಪತಿ ವಿಶ್ರಾವಸುವಿನ ಕೂಡ ರಮಿಸಿದಳು; ಕಾಲದೋಷದಿಂದ ಅವಳ ಗರ್ಭದ ಮೇಲೆ ತಮೋಗುಣದ ಪ್ರಭಾವವಾಯಿತು; ಬಲಿಷ್ಠರಾದ ಇಬ್ಬರು ಮಕ್ಕಳು ತಮೋಗುಣಪ್ರಧಾನರಾದರು, ಅವರೇ ರಾವಣ, ಕುಂಭಕರ್ಣರು. ಇವಳ ಹೊಟ್ಟೆಯಿಂದ 'ಶೂರ್ಪನಖಿ' ಎಂಬ ಕನ್ಯೆಯೂ ಜನಿಸಿತು; ಕೆಲವು ದಿನಗಳಾದ ಮೇಲೆ 'ವಿಭೀಷಣ'ನೆಂಬ ಮಗನು ಹುಟ್ಟಿದನು. ಅವನು ಸುಶೀಲನೂ, ಭಗವದ್ಭಕ್ತನೂ, ಸತ್ಯವಾದಿಯೂ ಧರ್ಮಾರ್ತನೂ ಆಗಿದ್ದನಲ್ಲದೆ ಪರಮ ಪವಿತ್ರನಾಗಿದ್ದನು.

ರಾವಣ ಕುಂಭಕರ್ಣರು ಹಿಮಾಲಯ ಪರ್ವತದಲ್ಲಿ ಅತ್ಯಂತ ಕಠೋರವಾಗಿ ತಪಸ್ಸು ಮಾಡಿದರು. ರಾವಣನು ದುಷ್ಟಾತ್ಮನಾಗಿದ್ದನು. ನನ್ನನ್ನು ಆರಾಧಿಸುವಾಗ ತನ್ನ ಮುಖಕಮಲಗಳನ್ನೇ ಕತ್ತರಿಸಿಕೊಡುತ್ತಿದ್ದನು. ಇದರಿಂದ ಸಂತುಷ್ಟನಾದ ನಾನು (ಮಹಾದೇವನು) ಅವನಿಗೆ -- "ಹೇಳು, ನಿನ್ನ ಇಚ್ಛೆ ಏನಿದೆಯೋ ಅಂದರಂತೆ ವರಕೊಡುವೆ" ಎಂದೆನು. ಆ ದುಷ್ಟಾತ್ಮನು "ದೇವಾ, ನಾನು ಸಮಸ್ತ ಜಗತ್ತಿನಲ್ಲಿ ವಿಜಯಿಯಾಗಬೇಕು. ಅಂದರೆ ನಾನು ದೇವ, ದಾನವ, ರಾಕ್ಷಸರಿಂದಲೂ ಸಾಯಬಾರದು ಎಂಬ ವರವನ್ನು ಕೊಡು". ಪಾರ್ವತಿಯೇ, ಅವನ ಬೇಡಿಕೆಯಂತೆ ನಾನು ವರವನ್ನು ಕೊಟ್ಟೆನು. ಅವನು ಮೂರು ಲೋಕಗಳಲ್ಲಿ ಪ್ರಾಣಿಗಳೆಲ್ಲರಿಗೂ ಪೀಡೆ ಮಾಡಹತ್ತಿದನು. ದೇವ, ದಾನವ, ಮಾನವರೆಲ್ಲರೂ ಅವನ ಉಪದ್ರವ ತಾಳಲಾರದೆ ಭಗವಾನ್ ಲಕ್ಷ್ಮೀಪತಿಗೆ ಶರಣುಹೋದರು. ಸನಾತನ ಪ್ರಭು ಶ್ರೀಮನ್ನಾರಾಯಣನು ದೇವತೆಗಳ ಕಷ್ಟನಿವಾರಣೆಗಾಗಿ ಬ್ರಹ್ಮಾದಿಗಳಿಗೆ ಒಂದು ಉಪಾಯ ಹೇಳಿದನು. "ದೇವಗಣವೇ, ನಾನು ರಘುಕುಲದಲ್ಲಿ ರಾಜನಾದ ದಶರಥನ ಮಗನಾಗಿ ಜನ್ಮತಾಳುವೆನು. ನನ್ನ ಅವತಾರ ಕಾರ್ಯವಾದ ಯುದ್ಧದಿಂದ ರಾವಣನು ಅವನ ಬಂಧುಬಾಂಧವರು ಹತವಾಗುವರು. ಮಾನವ ಶರೀರವನ್ನು ಧಾರಣಮಾಡಿ ದೇವತೆಗಳ ಕಷ್ಟವನ್ನು ದೂರಗೊಳಿಸುವೆನು. ಬ್ರಹ್ಮದೇವನ ಶಾಪದಂತೆ; ನೀವು ದೇವತೆಗಳು ಗಂಧರ್ವ, ಅಪ್ಸರರು, ವಾನರರಾಗಿ ಜನಿಸಿ ನನಗೆ ಸಹಾಯ ನೀಡಬೇಕು."

  

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

*ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.*

### ಆಲಯ ಕಾರ್ಯಕ್ರಮ.

| | |
|---|---|
| ಸುಪ್ರಭಾತ | ಬೆಳಗ್ಗೆ 5--00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5--30 ಗಂಟೆಗೆ |
| (ರೂ 6--00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | |
| 1ನೇ ಗಂಟೆ | ಬೆಳಗ್ಗೆ 6--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6--30 ಗಂಟೆಗೆ |
| ಶುದ್ಧಿ 2ನೇ ಗಂಟೆ | ಬೆಳಗ್ಗೆ 11--30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12--00 ಗಂಟೆಗೆ |
| 3ನೇ ಗಂಟೆ | ಸಂಜೆ 6--00 ಗಂಟೆಗೆ |
| ಸರ್ವದರ್ಶನ | ಸಂಜೆ 6--30 ಗಂಟೆಗೆ |
| ಶುದ್ಧಿ | ರಾತ್ರಿ 8--45 ಗಂಟೆಗೆ |
| ಏಕಾಂತ | ರಾತ್ರಿ 9--00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಭಿಷೇಕ | ಬೆಳಗ್ಗೆ 9--00 ಗಂಟೆಗೆ |
| (ರೂ. 100/-- ಶುಲ್ಕದಿಂದ ಒಬ್ಬರಿಗೆ ಪ್ರವೇಶ) | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/--) | |
| ಎರಡನೇ ಗಂಟೆ | ಬೆಳಗ್ಗೆ 11--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11--30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7--00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/--) | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | |
| 3ನೇ ಗಂಟೆ | ರಾತ್ರಿ 8--00 ಗಂಟೆಗೆ |
| ಸರ್ವದರ್ಶನ | ರಾತ್ರಿ 8--30 ಗಂಟೆಗೆ |
| ಶುದ್ಧಿ | ರಾತ್ರಿ 9--30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9--45 ಗಂಟೆಗೆ |

**ಪೇಷ್ಕಾರ್.**

ಶ್ರೀ ವಿಷ್ಣುವಿನ ಈ ಹೇಳಿಕೆಯನ್ನು ಕೇಳಿ ಎಲ್ಲ ದೇವತೆಗಳು ಈ ಭೂಮಿಯ ಮೇಲೆ ವಾನರರೂಪದಿಂದ ಪ್ರಕಟರಾದರು. ಅತ್ತ ಸೂರ್ಯವಂಶದಲ್ಲಿ ವೈವಸ್ವತ ಮನುವಿಗೆ 'ಇಕ್ಷ್ವಾಕು' ಎಂಬ ಪುತ್ರನು ಜನಿಸಿದನು. ಅವನು ಎಲ್ಲ ರಾಜರಲ್ಲಿ ಶ್ರೇಷ್ಠನೂ, ಮಹಾಬಲಶಾಲಿಯೂ, ಧರ್ಮಜ್ಞನೂ ಆಗಿದ್ದನು. ಅವನ ಕುಲಪರಂಪರೆಯಲ್ಲಿಯೆ ಮಹಾತೇಜಸ್ವಿ, ಪರಾಕ್ರಮಿಯಾಗಿದ್ದನಲ್ಲದೆ ತಂದೆ ಅಜರಾಜನಂತೆ ಸತ್ಯವಾದಿ, ಸುಶೀಲ, ಪವಿತ್ರ ಆಚಾರವಿಚಾರಗಳಿಂದ ಕೂಡಿದವನಾಗಿದ್ದನು. ತನ್ನ ಪರಾಕ್ರಮದಿಂದ ಸಮಸ್ತ ಭೂಮಂಡಲವನ್ನು ಸಂರಕ್ಷಿಸುತ್ತ ಮಾಂಡಲೀಕರರನ್ನು ಅವರವರ ರಾಜ್ಯಗಳಲ್ಲಿ ಸ್ಥಾಪಿಸಿದ್ದನು.

ಕೋಸಲ ದೇಶದಲ್ಲಿ ಸರ್ವಾಂಗ ಸುಂದರಿಯಾದ ಒಬ್ಬ ರಾಜಕನ್ಯೆಯಿದ್ದಳು. ಅವಳ ಹೆಸರು ಕೌಸಲ್ಯೆ, ರಾಜಾದಶರಥನು ಅವಳೊಡನೆ ಮದುವೆಯಾದನು.

ಮಗಧ ರಾಜಕುಮಾರಿಯಾದ ಸುಮಿತ್ರೆಯು ಅವನ ಎರಡನೆಯ ಹೆಂಡತಿಯಾದವಳು. ಕೇಕಯ ನರೇಶನ 'ಕೈಕೇಯಿ ಎಂಬ ಕನ್ಯೆಯು ದಶರಥ ಮಹಾರಾಜನ ಮೂರನೆಯ ಹೆಂಡತಿಯು. ಮೂವರು ಧರ್ಮಪತ್ನಿಯರೊಡನೆ ಧರ್ಮ ಪರಾಯಣನಾಗಿ ದಶರಥರಾಜನು ಪೃಥ್ವಿಯ ಪರಿಪಾಲನೆ ಮಾಡಹತ್ತಿದನು.

'ಅಯೋಧ್ಯಾ' ಎಂಬ ರಾಜಧಾನಿಯು ಸರಯೂ ನದಿಯ ತೀರದಲ್ಲಿದೆ. ಆ ಪಟ್ಟಣವು ಸರ್ವ ಸಂಪತ್ತಿನಿಂದ ಅಂದರೆ ವಜ್ರವೈಡೂರ್ಯ, ರತ್ನಗಳಿಂದ ತುಂಬಿಕೊಂಡಿತ್ತು; ಅಲ್ಲಿ ಧನಧಾನ್ಯಗಳ ಸಮೃದ್ಧಿಯಿದ್ದಿತು. ಬಂಗಾರದ ತಗಡುಗಳಿಂದ ಹೊದಿಸಿದ ಉನ್ನತವಾದ ಶಿಖರಗಳುಳ್ಳ ಗೋಪುರಗಳು, ರತ್ನಖಚಿತವಾದ ನಗರದ್ವಾರಗಳು ರಾಜಧಾನಿಯ ಸೌಂದರ್ಯವನ್ನು ಕಾಂತಿಗೊಳಿಸಿದ್ದವು. ಧರ್ಮಾತ್ಮನಾದ ದಶರಥರಾಜನು, ಅನೇಕ ಋಷಿ ಮುನಿಗಳಿಂದ ಹಾಗೂ ಮಹಾತ್ಮರಾದ ವಸಿಷ್ಠ ಪುರೋಹಿತರಿಂದ ಕೂಡಿಕೊಂಡು ಪರಮಕಲ್ಯಾಣಮಯವಾದ ಈ ಪಟ್ಟಣದಲ್ಲಿ ವಾಸವಾಗಿದ್ದನು. ಇಲ್ಲಿ ಯಾವ ತೊಂದರೆಗಳಿಲ್ಲದೆ, ಪ್ರಜೆಗಳು ಸುಖ ಸಮಾಧಾನದಿಂದ ಬಾಳುತ್ತಿದ್ದರು. ರಾಜಧಾನಿಯು ಶಾಂತಿ, ಸೌಹಾರ್ದದ ತವರು ಮನೆಯಾಗಿತ್ತು.

ಇಲ್ಲಿ ಪರಮಾತ್ಮನು ಅವತರಿಸಲಿರುವುದರಿಂದ ಈ ಅಯೋಧ್ಯಾಪಟ್ಟಣವು ಪರಮ ಪವಿತ್ರವಾಗಿತ್ತು. ಇಲ್ಲಿಯ ಪ್ರಜೆಗಳು ಸತ್ಯಧರ್ಮ ಪರಾಯಣರಾಗಿದ್ದರು. ಈ ರಾಜ್ಯದಲ್ಲಿ ಕಳವು, ಮೋಸ, ವಂಚನೆಗಳಿಗೆ ಆಸ್ಪದವಿರಲಿಲ್ಲ.

ರಾಜಾದಶರಥನು ಸಮಸ್ತ ಭೂಮಂಡಲವನ್ನು ಆಳುತ್ತಿರುವಾಗ ಪ್ರಜೆಗಳೆಲ್ಲರನ್ನು ಮಕ್ಕಳಂತೆ ಮಮತೆಯಿಂದ ಪಾಲಿಸುತ್ತಿದ್ದನು. ಆದರೆ ರಾಜನಿಗೆ ಔರಸ ಮಕ್ಕಳಿಲ್ಲ ಎಂಬ ಕೊರತೆಯಿದ್ದಿತು. ಈ ಕೊರತೆಯನ್ನು ದೂರಮಾಡುವುದಕ್ಕಾಗಿ ದಶರಥ ಮಹಾರಾಜನು ಪುತ್ರಕಾಮೇಷ್ಟಿ ಎಂಬ ವೈಷ್ಣವ ಯಜ್ಞವನ್ನು ವಿಧಿಪೂರ್ವಕವಾಗಿ ಮಾಡಿ ದನು. ಶ್ರೀಹರಿಯ ಯಜನ ಮಾಡಿದನು. ಭಕ್ತರೆಲ್ಲರಿಗೆ ವರಕೊಡುವ ಸರ್ವವ್ಯಾಪಕ ಲಕ್ಷ್ಮೀಪತಿ ಭಗವಾನ್ ವಿಷ್ಣುವು ಯಜ್ಞ ದ್ವಾರಾ ರಾಜನ ಪೂಜೆಯನ್ನು ಸ್ವೀಕರಿಸಿ ಅಲ್ಲಿ ಯಜ್ಞ ಕುಂಡದಲ್ಲಿ ಪ್ರಕಟನಾದನು.

ಮೇಘಶಾಮನಾದ, ಪೀತಾಂಬರಧಾರಿಯಾದ, ಶಂಖಚಕ್ರ ಕಿರೀಟ ಕುಂಡಲಗಳಿಂದ ಶೋಭಿಸುವ ಕಮಲಾಯತಾಕ್ಷನಾದ ಶ್ರೀ ವಿಷ್ಣುವು ಪ್ರತ್ಯಕ್ಷನಾಗಿ ಕಂಡನು. ಮಹಾಲಕ್ಷ್ಮಿಯು ವಾಮಾಂಕದಲ್ಲಿ (ಎಡ ತೊಡೆಯಮೇಲೆ) ಆಸೀನಳಾಗಿದ್ದಳು. ಭಕ್ತ ವತ್ಸಲನಾದ ಪರಮೇಶ್ವರನು ದಶರಥರಾಜನಿಗೆ ಈ ರೀತಿ ಹೇಳಿದನು. "ರಾಜನೇ, ನಾನು ನಿನಗೆ ವರವನ್ನು ಕೊಡುವುದಕ್ಕಾಗಿ ಬಂದಿರುವೆನು" ಎನ್ನಲು ಸಮಸ್ತ ಜಗತ್ತಿಗೆ ಒಡೆಯನಾದ ಭಗವಾನ್ ವಿಷ್ಣುವಿನ ದರ್ಶನ ಪಡೆದು ರಾಜಾ -- ದಶರಥನು ಆನಂದ ಮಗ್ನನಾದನು; ತನ್ನ ಹೆಂಡತಿಯೊಡನೆ ಕೂಡಿಕೊಂಡು ಶ್ರೀ ಭಗವಂತನ ಚರಣಕಮಲಗಳಿಗೆ ಪ್ರಸನ್ನಚಿತ್ತದಿಂದ ಪ್ರಣಾಮಮಾಡಿದನು. ಹರ್ಷೋದ್ಗದ ಚಿತ್ತನಾಗಿ ಮಾತನಾಡಿದನು. ಭಗವಂತನೇ, ನೀನು ನಮಗೆ ಪುತ್ರಭಾವದಿಂದ ಪ್ರಾಪ್ತನಾಗಲಿರುವಿ: ಇದನ್ನು ಕೇಳಿ ಭಗವಂತನು ರಾಜನಮೇಲೆ ಪ್ರಸನ್ನನಾಗಿ -- 'ನಾನು ದೇವಲೋಕದ ಹಿತಕ್ಕಾಗಿ, ಸಾಧುಸತ್ಪುರುಷರ ರಕ್ಷಣೆಗಾಗಿ ರಾಕ್ಷಸರ ವಧಕ್ಕಾಗಿ, ಭಕ್ತಜನರಿಗೆ ಮುಕ್ತಿಯನ್ನು ದಯಪಾಲಿಸುವುದಕ್ಕಾಗಿ ಧರ್ಮಸ್ಥಾಪನೆಗಾಗಿ ನಿನ್ನಲ್ಲಿ (ಈ ಲೋಕದಲ್ಲಿ) ಅವತರಿಸುವೆನು".

ಈ ರೀತಿಯಾಗಿ ಆಶ್ವಾಸನೆ ನೀಡುತ್ತ ಶ್ರೀಹರಿಯು ಸುವರ್ಣಪಾತ್ರೆಯಲ್ಲಿ ದಿವ್ಯ ಕ್ಷೀರ (ಪಾಯಸ) ವನ್ನು ಇಟ್ಟು ಲಕ್ಷ್ಮಿ ಯ ಕೈಯಿಂದ ರಾಜನಿಗೆ ಕೊಡಿಸಿದನು, ಮತ್ತು ತಾನು ಅಂತರ್ಧಾನನಾದನು. ರಾಜಾದಶರಥನು ಆ ಪ್ರಸಾದವನ್ನು ಸಂತೋಷದಿಂದ ಸ್ವೀಕರಿಸಿದನು. ತನ್ನ ಮೂವರು ರಾಣಿಯರಿಗೆ ಪಂಚಿಕೊಟ್ಟನು. ದಶರಥನ ಹಿರಿಯರಾಣಿ ಕೌಸಲ್ಯೆ, ಕಿರಿಯರಾಣಿ ಕೈಕೆಯಿಯರು ಅಲ್ಲಿಯೇ ಬಂದದ್ದರಿಂದ ಅವರಿಗೆ ಪ್ರಸಾದದಲ್ಲಿ ಸಮಭಾಗಮಾಡಿ ಕೊಟ್ಟನು. ಆದರೆ ಮಧ್ಯರಾಣಿ ಸುಮಿತ್ರೆಯು ಪುತ್ರಕಾಮನೆಯುಳ್ಳವಳಾಗಿ ರಾಜನ ಸಮೀಪದಲ್ಲಿ ಬಂದಳು. ಅವಳನ್ನು ಕಂಡಕೂಡಲೆ, ಮನದಿಂಗಿತವನ್ನರಿತ ರಾಣಿ ಕೌಸಲ್ಯೆ ಮತ್ತು ಕೈಕೆಯಿದೇವಿಯವರು ತಮಗೆ ದೊರೆತ ಪ್ರಸಾದದಲ್ಲಿ ಒಂದೊಂದು ಭಾಗವನ್ನು ಸುಮಿತ್ರಾ ದೇವಿಗೆ ಕೊಡಮಾಡಿದರು. ಹೀಗೆ ಮೂವರು ರಾಣಿಯರು ಆ ದಿವ್ಯ ಪ್ರಸಾದವನ್ನು ಉಂಡು, ಗರ್ಭವತಿಯರಾದರು. ಮೊದಲೇ ಸುಂದರಿಯರಾದ ಆ ರಾಣಿಯರು ಗರ್ಭ ಲಕ್ಷಣಗಳಿಂದ ಮೈಕೈ ತುಂಬಿಕೊಂಡು ಮತ್ತಷ್ಟು ಸುಂದರಿಯರಾಗಿ ಕಂಡರು. ದಶರಥ ರಾಜನು ಅವರ ಬಯಕೆಗಳನ್ನು ಈಡೇರಿಸಿ ಅವರನ್ನು ಸಂತೋಷಗೊಳಿಸಿದನು. ಹೀಗೆ ರಾಣಿಯರು ಸುಖದ ಸುಪ್ಪತ್ತಿಗೆಯಲ್ಲಿ ಪವಡಿಸುವಾಗ ಶುಭಸೂಚಕ ಸ್ವಪ್ನಗಳನ್ನು ಕಾಣಹತ್ತಿದರು. ಬಯಕೆ ಬರುವುದರ ಮುನ್ಸೂಚನೆಯೆಂಬಂತೆ ಮುಂಬರುವ ಭಾಗ್ಯ ಚಿಹ್ನಗಳು ತಲೆದೋರಹತ್ತಿದವು.

ಇತ್ತ ದೇವಲೋಕದಲ್ಲಿ ಬ್ರಹ್ಮದೇವರು ಎಲ್ಲ ದೇವತೆಗಳ ಸಭೆಕರೆದರು. "ತನಗೆ ಪ್ರಯೋಜನ ವಿಲ್ಲದಿದ್ದರೂ ನಮ್ಮ ಮೇಲಿನ ಕರುಣೆಯಿಂದ ನಮಗಾಗಿ ಮತ್ತು ಜಗತ್ತಿನ ಹಿತಕ್ಕಾಗಿ ಶ್ರೀ ಹರಿಯು ಅವತರಿಸುವನು. ಈ ಸಮಯದಲ್ಲಿ ನಾವೆಲ್ಲರು ಕಪಿ, ಕರಡಿ ಮೊದಲಾದ ಮೃಗ ಪಕ್ಷಿಗಳಲ್ಲಿ ಅವತರಿಸಿ ಅವನ ಸೇವೆ ಮಾಡುವುದು ನಮ್ಮ ಕರ್ತವ್ಯವಾಗಿದೆ. ನನಗೆ ಅವತಾರವಿಲ್ಲದಿದ್ದರೂ ಧರ್ಮದೇವತೆಯ ರೂಪದಲ್ಲಿರುವೆ." ಬ್ರಹ್ಮದೇವನ ಅಪ್ಪಣೆಯಂತೆ ದೇವತೆಗಳೆಲ್ಲರೂ ಭೂಲೋಕದಲ್ಲಿ ಅವತರಿಸಿದರು.

ದೇವೇಂದ್ರನು ವಾಲಿಯಾದನು. ಚಂದ್ರನು ವಾಲಿಯ ಮಗ ಅಂಗದನಾದನು. ಸೂರ್ಯದೇವನು ಸುಗ್ರೀವನಾಗಿಯೂ, ಅಗ್ನಿದೇವನು ನೀಲನಾಗಿಯೂ, ವಿಶ್ವಕರ್ಮನು ನಲನಾಗಿಯೂ, ಅಶ್ವಿನಿದೇವತೆಗಳು ಮೈಂದ ವಿನಂದರಾಗಿಯೂ ಜನಿಸಿಬಂದರು. ಶಚೀದೇವಿಯು ತಾರಾದೇವಿಯಾಗಿ ಕಪಿ ವಂಶದಲ್ಲಿ ಅವತರಿಸಿದರು. ಹೀಗೆ ಎಲ್ಲ ದೇವತೆಗಳು ಬೇರೆ ಬೇರೆ ಜಾತಿಗಳಲ್ಲಿ ಅವತರಿಸಿ ಶ್ರೀಹರಿಯನ್ನು ನಾನಾವಿಧದಲ್ಲಿ ಸೇವಿಸಲಿಚ್ಛಿಸಿದರು.

ಭೂಮಿಯಲ್ಲಿ ಹೊಸ ಚೈತನ್ಯ ತುಂಬಲು ಚೈತ್ರ ಮಾಸವು ಪ್ರಾಪ್ತವಾಯಿತು. ಹೊಸವರುಷದ ಹೊಸ ಹರುಷದ ಪರಿಕಾರನಂತಿದ್ದ ಮನೋಹರವಾದ ಮಧುಮಾಸವು ಬಂದಿತು. ಶುಕ್ಲ ಪಕ್ಷದ ನವಮಿ (ಮಂಗಲ ಮಯ) ದಿನದಂದು ಪುನರ್ವಸು ನಕ್ಷತ್ರದ ಮಧ್ಯಾಹ್ನದಲ್ಲಿ ಶುಭಸಮಯದಲ್ಲಿ ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಅನಿರುದ್ಧರೆಂಬ ನಾಲ್ಕು ರೂಪಗಳುಳ್ಳ ಶ್ರೀಹರಿಯು ವಾಸುದೇವ ರೂಪದಿಂದ ಕೌಸಲ್ಯೆಯಲ್ಲಿ ಅವತರಿಸಿದನು. ದೇವ ದುಂದುಭಿಗಳು ಮೊಳಗಿದವು, ಎಲ್ಲ ಕಡೆಗೂ ಪ್ರಸನ್ನತೆ ಮೂಡಿತು.

ಯಾವನು ಯೋಗಿಗಳ ಧ್ಯೇಯವಾಗಿರುವನೋ, ಸನಾತನ ಪ್ರಭುವೋ, ಉಪನಿಷತ್ ಪ್ರತಿಪಾದ್ಯ ತತ್ವನೋ, ಅನಂತನೋ, ಸಂಸಾರದ ಸೃಷ್ಟಿ, ಸ್ಥಿತಿ, ಲಯಗಳ ಹೇತುವಾಗಿರುವನೋ, ಶರಣಾಗತರಿಗೆ ಶರಣ್ಯ ಆಶ್ರಯದಾತನೋ, ಸರ್ವಭೂತ ಸ್ವರೂಪನಾದ ಪರಮಾತ್ಮನು, ಚೈತ್ರಮಾಸದ ಶುಕ್ಲ ನವಮಿ ತಿಥಿಯಲ್ಲಿ ಪುನರ್ವಸು ನಕ್ಷತ್ರದಲ್ಲಿ ಮಧ್ಯಾಹ್ನ ಶುಭ ಸಮಯದಲ್ಲಿ ಮಹಾರಾಣಿ ಕೌಸಲ್ಯೆಯಿಂದ ಅವತರಿಸಿದನು. ಆಗ ಜನ್ಮಲಗ್ನ ಕುಂಡಲಿಯು ಉತ್ತಮವಾಗಿತ್ತು. ಎಲ್ಲ ಗ್ರಹಗಳು ಶುಭಸ್ಥಾನದಲ್ಲಿದ್ದವು. ಸಕಲ ಗ್ರಹಬಲನಾದ ಪರಮಾತ್ಮನೇ ಅವತರಿಸುವಾಗ ಅನ್ಯಗ್ರಹಗಳು ಶುಭಕಾರಕವಾಗಿರಲೇಬೇಕು. ಜಗದೀಶ್ವರನ ಅವತಾರವಾಗಲು ಆಕಾಶದಲ್ಲಿ ದೇವತೆಗಳ ದುಂದುಭಿ ಮೊಳಗಿತು. ದೇವತಾಶ್ರೇಷ್ಠರು ಪುಷ್ಪವೃಷ್ಟಿ ಮಾಡಿದರು.

ಬ್ರಹ್ಮನೇ ಮೊದಲಾದ ದೇವಗಣವು ಮುನಿಗಳ ಜೊತೆಗೆ ವಿಮಾನದಲ್ಲಿ ಕುಳಿತು ಸಂತೋಷಚಿತ್ತರಾಗಿ ಶ್ರೀಮನ್ನಾರಾಯಣನ ಸ್ತೋತ್ರ ಮಾಡಿದರು. ಮುತ್ತೈದೆಯರೆಲ್ಲರೂ ಕೂಡಿದರು. "ರಮಾದೇವಿಗೆ ಪತಿಯಾಗುವುದರಿಂದಲೂ ಮೋಕ್ಷಾದಿ ಸಕಲ ಪುರುಷಾರ್ಥ ಕೊಡುವುದರಿಂದ ಈ ಮಗುವಿಗೆ 'ರಾಮ' ಎಂದು ನಾಮಕರಣ ಮಾಡಿದರು. ಭಕ್ತಿರಸ ಉಕ್ಕೇರಿ ತೊಟ್ಟಿಲಲ್ಲಿ ಮಲಗಿಸಿ ಜೋಗುಳ ಹಾಡಿದರು.

ಜೋಜೋ ನಿಜಕಂದಾ ಮುಕುಂದಾ
ಜೋಜೋ ಪರಮಾನಂದ ಬಾಲಾ --ಪ--

ಆಲದೆಲೆಯಲಂದು ಮಲಗಿರಲು
ಲಾಲಿಯೆಂದರು ಯಾರಲ್ಲಿ --1--

ಇಂದಿರೆ ಪತಿ ನರರ ಸುಖಬಯಸಿ
ಬಂದ ಫಣೀಂದ್ರನ ತ್ಯಜಿಸಿ --2--

ಗುರುಮಹಿಪತಿಸ್ವಾಮಿ ರಘುವೀರಾ
ಸುರಮುನಿಜನ ಸಹಕಾರ --3--

ಎಂದು ಸರಾಗವಾಗಿ ಜೋಗುಳ ಹಾಡಿ ಸಂತೋಷಪಟ್ಟರು.

ಆಜಾನುಬಾಹುಂ, ಬದ್ಧ ಪದ್ಮಾಸನಸ್ಥಂ,
ಪೀತಂ ವಾಸೋವಸಾನಂ,
ನವ ಕಮಲದಲ ಸ್ಪರ್ಧಿ ನೇತ್ರಂ,
ಪ್ರಸನ್ನಂ, ರಾಮಚಂದ್ರಮ್ ಧ್ಯಾಯೇತ್

ಈ ರೀತಿಯಾಗಿ ಧ್ಯಾನಮಾಡಿದರು. ಶ್ರೀ ರಾಮಾವತಾರವು ಜಗತ್ತಿಗೆ ಕಲ್ಯಾಣವನ್ನುಂಟುಮಾಡಿತು.

"ಶ್ರೀ ರಾಮಚಂದ್ರಾರ್ಪಣಮಸ್ತು" ✪

ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಸಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ :--

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ. 3 ಲಕ್ಷ, ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾಧ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುಲವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ, ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ, (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು ಒಂದು ಬಾರಿಗೆ 10 ಶತಾಂಶ ದಂತೆ; ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇ., ತಿರುಪತಿ.

# ಶ್ರೀ ಶಂಕರಾಚಾರ್ಯರು

---ಎಚ್. ವಿ. ನರಸಿಂಹ ಮೂರ್ತಿ.

ಮುವ್ವತ್ತೆರಡು ವರ್ಷಗಳ ತಮ್ಮ ಸಾರ್ಥಕ ಬದುಕಿನಲ್ಲಿ ಭರತಖಂಡದ ಮೂಲೆ-- ಮೂಲೆಯಲ್ಲೂ ಮಿಂಚಿನಂತೆ ಸಂಚರಿಸಿ, ಚತುರಾಮ್ನಾಯ ಪೀಠಗಳನ್ನು ಸ್ಥಾಪಿಸಿ 'ಜೀವೋ ಬ್ರಹ್ಮೈವ ನಾಽಪರಃ' ಎಂದು ಅದ್ವೈತದ ಡಿಂಡಿಮವನ್ನು ಬಾರಿಸಿದವರು, ಶ್ರೀ ಶಂಕರಾಚಾರ್ಯರು. ದೇಶ ಹಾಗೂ ಸಮಾಜಕ್ಕೆ ಕವಿದ ದುರವಸ್ಥೆಯನ್ನು ದೂರಗೊಳಿಸಲು ತಮ್ಮ ಜ್ಞಾನದ ಖಡ್ಗವನ್ನು ಹಿರಿದವರು, ಅವರು. ಜಗತ್ತಿಗೆ, ಅವರ ಸಮಸ್ಯೆಗಳಿಗೆ ಹೆದರಿ ಬೆನ್ನು ತಿರುಗಿಸಲು ಅವರು ಸನ್ಯಾಸ ಸ್ವೀಕರಿಸಲಿಲ್ಲ. ಅವುಗಳಿಗೆ ಭುಜಕೊಟ್ಟು ಹೋರಾಡಲು, ಅವುಗಳ ಎದೆ ಮೆಟ್ಟಿ ವಿಜಯ ದುಂದುಭಿ ಬಾರಿಸಲು ಅವರು ನಿರ್ಧರಿಸಿ ಹೊರಟರು. ಅದಕ್ಕಾಗಿ ವಯ್ಯಕ್ತಿಕ ಜಂಜಡಗಳಿಂದ ದೂರಸರಿದು, ಜಗತ್ತಿನ ಜಂಜಡವನ್ನು ಹತ್ತಿಸಿಕೊಂಡರು; ಮಹಾ ಸನ್ಯಾಸಿಯಾಗಿ ಹಿಂದೂ ಧರ್ಮದ ಬಾವುಟವನ್ನು ಬಾನಿನೆತ್ತರಕ್ಕೆ ಏರಿಸಿದರು. ಅದ್ಭುತ ಕಾವ್ಯ ಪ್ರತಿಭೆ ಹಾಗೂ ವಾಕ್ಚಾತುರ್ಯವನ್ನು ಹೊಂದಿದ ಇವರು ಪ್ರಸ್ಥಾನತ್ರಯಗಳಿಗೆ ಭಾಷ್ಯರಚಿಸಿದರು; ಪ್ರಕರಣ ಗ್ರಂಥಗಳನ್ನು ಬರೆದರು. ಭಕ್ತಿರಸದಿಂದ ತುಂಬಿ ತುಳುಕಾಡುವ, ತನು--ಮನಗಳ ಶುದ್ಧಿಗೆ ಪೋಷಕವಾದ, ಮನುಷ್ಯನ ಮೇಲ್ಮುಖಿಯಾನಕ್ಕೆ ಸಹಾಯಕವಾದ ಸ್ತೋತ್ರಗಳನ್ನು ರಚಿಸಿದರು.

## ಪ್ರಭಾವಶಾಲೀ ವ್ಯಕ್ತಿತ್ವ :

ಆಚಾರ್ಯರ ಪ್ರಭಾವಶಾಲೀ ವ್ಯಕ್ತಿತ್ವದ ಮುಂದೆ ಮಣಿಯದವರಿಲ್ಲ. ಕೇವಲ ಪೌರ್ವಾತ್ಯರು ಮಾತ್ರವಲ್ಲ ಪಾಶ್ಚಮಾತ್ಯ ವಿದ್ವಾಂಸರೂ ಸಹ ಶಂಕರರ ವೈವಿಧ್ಯಪೂರ್ಣ ವ್ಯಕ್ತಿತ್ವಕ್ಕೆ ಮಾರು ಹೋಗಿದ್ದಾರೆ. ಭಾರತೀಯ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಅದ್ವೈತ ಸಿದ್ಧಾಂತವನ್ನು ಮೈಗೂಡಿಸಿಕೊಂಡ ವಿಲ್ ಡ್ಯೂರಾನ್ಟ್ ಎಂಬ ಪಾಶ್ಚಿಮಾತ್ಯ ವಿದ್ವಾಂಸನೊಬ್ಬ ಶ್ರೀ ಶಂಕರರ ಬಗ್ಗೆ ಹೇಳುತ್ತಾ ಶ್ರೀ ಶಂಕರರು ಜ್ಞಾನಿಯಾಗಿ, ದೈವಭಕ್ತರಾಗಿ, ವಿವೇಕ-- ಭೂತದಯೆಗಳ ಸಂಗಮವಾಗಿ ರಾರಾಜಿಸಿದವರು. ತಮ್ಮ ಮುವ್ವತ್ತೆರಡು ವರ್ಷಗಳ ಅಲ್ಪಾವಧಿಯ ಜೀವನದಲ್ಲಿ ಭಾರತದ ಅತ್ಯುದಾತ್ತ ಮಾನವ ವ್ಯಕ್ತಿತ್ವದ ಪ್ರತೀಕವಾಗಿ ಬಾಳಿದವರು, ಅವರು -- ಎನ್ನುವ ಪ್ರಾಮಾಣಿಕ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ. ಇದೇ ರೀತಿ ಅರ್ಥರ್ ಐಸೆನ್‌ಬರ್ಗ್, ಚಾರ್ಲ್ಸ್ ಜಾನ್ಸನ್ -- ಮೊದಲಾದ ವಿದ್ವಾಂಸರೂ ಸಹ ಶಂಕರರ ಅತ್ಯದ್ಭುತ ಪ್ರತಿಭೆ, ಆಧ್ಯಾತ್ಮಿಕ ಸಂಪತ್ತು, ಭೂತದಯೆ ಮೊದಲಾದ ಅಸಾಧಾರಣ ಗುಣಗಳನ್ನು ಕಂಡು ಅವರನ್ನು ಮುಕ್ತಕಂಠದಿಂದ ಪ್ರಶಂಸಿಸಿ ತಮ್ಮ ಗೌರವ ವ್ಯಕ್ತಪಡಿಸಿದ್ದಾರೆ.



ಶಂಕರರು ಅವತಾರವೆತ್ತಿದ ಕಾಲದಲ್ಲಿ ಭಾರತ ರಾಜಕೀಯವಾಗಿ ಹರಿದು -- ಹಂಚಿಹೋಗಿತ್ತು; ಸಾಮಾಜಿಕವಾಗಿ ಅಸ್ತವ್ಯಸ್ತವಾಗಿತ್ತು. ಪರಸ್ಪರ ಹೊಂದಾಣಿಕೆಯಿಲ್ಲದ ಅನೇಕ ರಾಜ್ಯಗಳು ತಮ್ಮ -- ತಮ್ಮಲ್ಲಿಯೇ ಅಧಿಕಾರಕ್ಕಾಗಿ ಸ್ಪರ್ಧೆ ನಡೆಸುತ್ತಿದ್ದುವು. ಸ್ವಾರ್ಥದ ಮಾರಿಗೆ ಶಾಂತಿಯನ್ನು ಬಲಿಕೊಟ್ಟಾಗಿತ್ತು. ಒಂದು ಕಡೆ ವೇದಗಳ ಅಂತರಂಗವನ್ನು ಮರೆತು ಅವುಗಳ ಶಬ್ದಕ್ಕೆ ಅಂಟಿಬಿದ್ದಿದ್ದ ಶಬ್ದಾರ್ಥವಾದಿಗಳೂ, ಕರ್ಮವಾದಿಗಳೂ ಇದ್ದರು; ಇನ್ನೊಂದು ಕಡೆ ಬೇರೆ--ಬೇರೆ ದರ್ಶನಗಳ ಪ್ರತಿಪಾದಕರಲ್ಲಿ ಕಚ್ಚಾಟ ನಡೆಯುತ್ತಿತ್ತು. 'ಏಕಂಸತ್' ಎಂಬ ವೈದಿಕ ಬೋಧನೆಯ ಮೂಲವನ್ನೇ ವಿದ್ವಾಂಸರೂ, ಸಾಮಾನ್ಯರೂ ಮರೆತಂತಿತ್ತು. ಬೇರೆ--ಬೇರೆ ನಂಬಿಕೆಗಳ ಮುಂದಾಳುಗಳೂ, ಅವರ ಅನುಯಾಯಿಗಳೂ ಮತವನ್ನು ಬಾಳಿನ ಶಾಂತಿ -- ಸಮಾಧಾನಗಳಿಗೆ ಬಳಸುವುದರ ಬದಲು ಆಕ್ರಮಣದ ಸಾಧನವನ್ನಾಗಿ ಮಾಡಿಕೊಂಡಿದ್ದರು. ಇಂತಹ ಬಿಕ್ಕಟ್ಟಿನ ಗೊಂದಲದ ಸಮಯದಲ್ಲಿ ಆಚಾರ್ಯರು ಜನ್ಮತಳೆದರು. ಇವರ ಹುಟ್ಟೂರು ಕೇರಳರಾಜ್ಯದ ಕಾಲಟಿ ಎಂಬ ಗ್ರಾಮ. ತಾಯಿ ಆರ್ಯಾಂಬೆ; ತಂದೆ ಶಿವಗುರು; ಎಂಟನೆಯ ವರ್ಷದಲ್ಲೇ ಗೋವಿಂದ ಭಗವತ್ಪಾದರೆಂಬ ಗುರುಗಳಿಂದ ಸನ್ಯಾಸ ಸ್ವೀಕರಿಸಿದರು. ಮುವ್ವತ್ತೆರಡು ವರ್ಷದ ತಮ್ಮ ಸಂಕ್ಷಿಪ್ತ ಜೀವನದಲ್ಲಿ ಅದ್ವೈತದಂತಹ ಮಹತ್ವದ ಸಿದ್ಧಾಂತವನ್ನು ಜಗತ್ತಿಗೆ ಕೊಟ್ಟು ಭಾರತದ ಜೀವನಕ್ಕೊಂದು ಭದ್ರ ಬುನಾದಿ ಹಾಕಿದ ಅಸಾಧಾರಣ ವ್ಯಕ್ತಿತ್ವ ಶ್ರೀ ಶಂಕರರದು.

## ಏಕತೆಯ ಸಿದ್ಧಾಂತ :

ಆಚಾರ್ಯಶಂಕರರು ಬೋಧಿಸಿದ ಅದ್ವೈತ ಸಿದ್ಧಾಂತ, ಏಕತೆಯ ಸಿದ್ಧಾಂತ. ಇದನ್ನು ಸಂಗ್ರಹವಾಗಿ 'ಬ್ರಹ್ಮಸತ್ಯಂ ಜಗನ್ಮಿಥ್ಯ ಜೀವೋ ಬ್ರಹ್ಮೈವ ನಾಽಪರಃ' ಎಂದು ಹೇಳುವುದುಂಟು. ಅಂದರೆ ಬ್ರಹ್ಮವು ಸತ್ಯ. ಎಲ್ಲೆಲ್ಲಿಯೂ ಬ್ರಹ್ಮವಸ್ತು ವ್ಯಾಪಿಸಿರುತ್ತದೆ. ಅದನ್ನು ಬಿಟ್ಟು ಬೇರೆಯಾಗಿ ಕಾಣುವುದೆಲ್ಲ ಮಾಯೆ. ಈ ಮಾಯೆಯು ನಮ್ಮ ಕಣ್ಣಿಗೆ ಬಣ್ಣದ ಕನ್ನಡದಂತೆ ವಿವಿಧರೂಪಗಳನ್ನು ತೋರಿಸುತ್ತದೆ. ಅವುಗಳಿಗೆ ನಾವು ಬೇರೆ--ಬೇರೆ ಹೆಸರುಗಳನ್ನು ರೂಢಿಮಾಡಿಕೊಂಡಿದ್ದೇವೆ. ಅವುಗಳ ಹೆಸರನ್ನು ಪೂರ್ತಿಯಾಗಿ ಅಳಿಸಿ ಹಾಕಿದರೆ ಉಳಿಯುವುದು ಒಂದೇ ಚೈತನ್ಯ. ಅದು ಬ್ರಹ್ಮವೆಂಬುದು. ಬ್ರಹ್ಮವು ಎಲ್ಲ ನಾಮ -- ರೂಪಗಳ ಒಳಗಡೆಗೂ ಹರಿದಿರುತ್ತದೆ. ಅದನ್ನೇ ಮಹಾವಾಕ್ಯಗಳಲ್ಲಿ 'ಅಹಂ ಬ್ರಹ್ಮಾಸ್ಮಿ ತತ್ವಮಸಿ; ಸರ್ವಂ ಖಲ್ವಿದಂ ಬ್ರಹ್ಮ' -- ಎಂದು ಹೇಳುತ್ತಾರೆ. ಆ ಒಂದು ವಸ್ತುವೇ ನಾನು, ನೀನು, ಅವನು -- ಮೊದಲಾದ ಹೆಸರುಗಳಿಂದ ವ್ಯವಹಾರದಲ್ಲಿ ಕರೆಯುವ ವಸ್ತುಗಳ ಅಂತಶ್ಚೈತನ್ಯ. 'ಏಕಂ ಸದ್ವಿಪ್ರಾಃ ಬಹುಧಾವದಂತಿ' ಎಂಬಂತೆ ಪರಮಾರ್ಥ ಸತ್ಯ ಒಂದೇ. ಅದನ್ನು ಜನರು ಬೇರೆ--ಬೇರೆ ಹೆಸರಿನಿಂದ ಕರೆಯುತ್ತಾರೆ. ಬ್ರಹ್ಮ ಒಂದೇ ಸತ್ಯ. ಜಗತ್ತು ಮಿಥ್ಯಾಭೂತವಾದುದು. ಜೀವವು ಬ್ರಹ್ಮವಲ್ಲದೆ ಬೇರೆಯಲ್ಲ -- ಇದೇ ಸಮನ್ವಯಾತ್ಮಕವಾದ, ಏಕತೆಯನ್ನು ಪ್ರತಿಪಾದಿಸುವ ಅದ್ವೈತ ಸಿದ್ಧಾಂತದ ಸಾರ. ಈ ಅದ್ವೈತದಿಂದ ನಮ್ಮ ಪ್ರತಿಯೊಂದು ವಿಚಾರ, ಭಾವನೆ, ಚಲನ -- ವಲನಗಳು ಸಹಜವಾಗಿಯೇ ಉದಾತ್ತಗೊಳ್ಳುತ್ತವೆ; ಅವುಗಳ [illegible]

ಪ್ರೇಮ ಉಕ್ಕೇರುತ್ತದೆ. ಲೋಕಕಲ್ಯಾಣದ ಪ್ರೇರಣೆ ಪುಟಿದೇಳುತ್ತದೆ. ಸ್ವಾರ್ಥದ ಸ್ಥಳದಲ್ಲಿ ತ್ಯಾಗ, ಶೋಷಣೆಯ ಸ್ಥಳದಲ್ಲಿ ಸೇವೆ, ಘರ್ಷಣೆಯ ಸ್ಥಾನದಲ್ಲಿ ಸಹಕಾರ, ಭೇದವಿದ್ದಲ್ಲಿ ಏಕತೆ ಮೂಡಿಬರುತ್ತದೆ. ಈ ಅದ್ವೈತಸಿದ್ಧಾಂತ ಭಾರತೀಯ ದಾರ್ಶನಿಕ ಪರಂಪರೆಗೆ ಭಗವತ್ಪಾದ ಶಂಕರರು ನೀಡಿದ ಬಹುದೊಡ್ಡ ಕೊಡುಗೆ.

## ಮಾನವೀಯತೆಯ ನಿದರ್ಶನ:

ಶ್ರೀಮದಾಚಾರ್ಯರ ವ್ಯಕ್ತಿತ್ವ ಬಹುಮುಖವಾದುದು; ಅಸಾಧಾರಣ ಪ್ರತಿಭೆ -- ಮಹತ್ವಗಳಿಂದ ಕೂಡಿದುದು. ಯೋಗಿಯಾಗಿ, ಜ್ಞಾನಿಯಾಗಿ, ಧರ್ಮೋಪದೇಶಕರಾಗಿ, ಸಮಾಜಸುಧಾರಕರಾಗಿ, ಭಕ್ತರಾಗಿ, ಗ್ರಂಥ ನಿರ್ಮಾಪಕರಾಗಿ, ಕವಿಯಾಗಿ ಶ್ರೀಶಂಕರರು ಅತ್ಯದ್ಭುತ ಪ್ರತಿಭೆ-- ಸಾಮರ್ಥ್ಯಗಳನ್ನು ಪ್ರದರ್ಶಿಸಿದ್ದಾರೆ. ಸುಮಾರು ಒಂದೂವರೆ ಸಾವಿರ ವರ್ಷಗಳ ಹಿಂದೆ ಜೀವಿಸಿದ್ದವರಾದರೂ ಅವರು ಈ ಎಲ್ಲ ಕ್ಷೇತ್ರಗಳಲ್ಲಿಯೂ ಪ್ರದರ್ಶಿಸುವ ಮನೋಧರ್ಮ, ದೃಷ್ಟಿವೈಶಾಲ್ಯ ಅತ್ಯಾಧುನಿಕವಾದುದು. ಶಂಕರರು ಸನಾತನಧರ್ಮದ ಪುನರುದ್ಧಾರಕ್ಕಾಗಿಯೇ ಅವತರಿಸಿದ ಮಹಾ ಪುರುಷರಾದರೂ, ಅವರು ಆ ಧರ್ಮದ ಪ್ರತಿಪಾದನೆಯಲ್ಲಿ ಎಂದೂ ಅಂಧಶ್ರದ್ಧೆ ತೋರಿದವರಲ್ಲ. ತಮ್ಮ ವಿವೇಚನೆ -- ಯುಕ್ತಿಗಳಿಗೆ ಒಪ್ಪದ ಆಚಾರಗಳನ್ನು ಧೈರ್ಯವಾಗಿ ತಿರಸ್ಕರಿಸಿ, ಅವುಗಳಿಗೆ ವಿರೋಧವಾಗಿಯೇ ನಡೆದುಕೊಂಡ ಸನ್ನಿವೇಶಗಳು ಅವರ ಜೀವನದಲ್ಲಿ ಹಲವಾರು ಇವೆ. ಕೇವಲ ಕೆಲವನ್ನು ಮಾತ್ರ ಇಲ್ಲಿ ಉದಾಹರಣೆಗಾಗಿ ನಿರೂಪಿಸಬಹುದು. ಕಲಿಯುಗದಲ್ಲಿ ಸನ್ಯಾಸವು ವರ್ಜ್ಯವೆಂದು ಸನಾತನಿಗಳು ತಮ್ಮವಾದವನ್ನು ಮಂಡಿಸಿದಾಗ, ಆ ಸನಾತನಿಗಳ ವಾದವನ್ನೆಲ್ಲ ಪ್ರತಿಭಟಿಸಿ, ಸನ್ಯಾಸವು ಶಾಸ್ತ್ರಸಮ್ಮತವೆಂದು ವಾದಿಸಿ, ಅವರ ಫಲಾಫಲಗಳನ್ನೆಲ್ಲ ಅನುಭವಿಸಲು ಸಿದ್ಧವಾಗುವ ಕೆಚ್ಚು ಅವರಲ್ಲಿ ಇತ್ತು. ಹಾಗೆಯೇ ಸನ್ಯಾಸಿಯಾದವನು ಎಲ್ಲ ಕರ್ಮಗಳಿಂದಲೂ ಮುಕ್ತನಾದುದರಿಂದ ಪಿತೃಕರ್ಮವನ್ನು ಮಾಡಬೇಕಾಗಿಲ್ಲವೆಂದು ಶಾಸ್ತ್ರಗಳು ಸಾರುತ್ತಿದ್ದರೂ ಕೇವಲ ಮಾನವೀಯತೆಯ ದೃಷ್ಟಿಯಿಂದ ಹಾಗೂ ತಮ್ಮತಾಯಿಗೆ ಕೊಟ್ಟ ಮಾತನ್ನು ನೆರವೇರಿಸುವ ಉದ್ದೇಶ್ಯದಿಂದ ತಮ್ಮ ತಾಯಿಯ ಶವಸಂಸ್ಕಾರ ನೆರವೇರಿಸಲು ಅವರು ಮುಂದೆ ಬಂದರು. ಮತ್ತೊಂದು ನಿದರ್ಶನವನ್ನು ಕೊಡುವುದಾದರೆ ಕಾಶಿಯ ವಿಶ್ವೇಶ್ವರ ದೇವಾಲಯದ ಬಳಿ ಆಚಾರ್ಯರು ಚಂಡಾಲ ನೊಬ್ಬನನ್ನು ಸಂದರ್ಶಿಸುತ್ತಾರೆ. ಆದರೆ ಅವನಾಡಿದ ಅತ್ಯಂತ ಸಮಂಜಸ ಹಾಗೂ ತತ್ವಭರಿತ ಮಾತುಗಳಿಗೆ ಮೆಚ್ಚಿ 'ಚಂಡಾಲೋಽಸ್ತು ಸಚದ್ವಿಜೋಽಸ್ತು ಗುರುರಿತ್ಯೇಷಾ ಮನೀಷಾ ಮಮ' -- 'ಅಂತಹ ಜ್ಞಾನಿಯಾದವನು ಚಂಡಾಲನೇ ಆಗಿರಲಿ, ಬ್ರಾಹ್ಮಣನೇ ಆಗಿರಲಿ, ಅವನು ನನ್ನ ಗುರು ಸಮಾನ' -- ಎಂದು ಹೇಳುವಷ್ಟು ದೃಷ್ಟಿ ವೈಶಾಲ್ಯ, ಉದಾರಚಿತ್ತ, ವಿಚಾರಪರತೆ ಅವರಲ್ಲಿತ್ತು. ಆದ್ದರಿಂದಲೇ ಅವರು ಮಾನವೀಯತೆಯ ಜ್ವಲಂತ ನಿದರ್ಶನವಾಗಿ, ಆಧುನಿಕ ವಿಚಾರಧಾರೆಯ ಮಹಾಪ್ರವಾದಿಯಾಗಿ ನಮ್ಮೆಲ್ಲರ ಮನಸ್ಸಿನ ಮೇಲೂ ಗಾಢಪ್ರಭಾವ ಬೀರುತ್ತಾರೆ.



## ಕರುಣಾಮೂರ್ತಿ :

ತಾತ್ವಿಕನಾದವನು ಯಾವಾಗಲೂ ಆತ್ಮವಿಚಾರ ಮಾಡುತ್ತಾ, ನಿರ್ವಿಕಲ್ಪ ಸಮಾಧಿಯಲ್ಲಿ ಲೀನನಾಗಿ, ಐಹಿಕ ವ್ಯಾಪಾರಗಳಿಂದ ದೂರನಾಗಿರುತ್ತಾನೆ; ಅವನ ಹೃದಯದಲ್ಲಿ ಪ್ರೇಮ -- ಸ್ನೇಹ -- ದಯೆ ಮೊದಲಾದ ಮಾನವೀಯ ಭಾವನೆಗಳಿಗೆ ಎಡೆ ಇರುವುದಿಲ್ಲ -- ಎಂಬುದು ಸಾಮಾನ್ಯವಾಗಿ ಬೆಳೆದು ಬಂದ ನಂಬಿಕೆ. ಈ ನಂಬಿಕೆ ಒಂದು ವೇಳೆ ಕೆಲವಂದಿ ತಾತ್ವಿಕರ ವಿಚಾರದಲ್ಲಿ ನಿಜವಿದ್ದರೂ, ಆಚಾರ್ಯ ಶಂಕರರಂತೂ ಈ ಮಾತಿಗೆ ಅಪವಾದ -- ಎಂದು ದೃಢವಾಗಿ ಹೇಳಬಹುದು. ಅವರ ಹೃದಯ ಅಪಾರ ಕರುಣೆಯಿಂದ ತುಂಬಿತ್ತು. ದುಃಖದಲ್ಲಿರುವವರನ್ನು ಕಂಡೊಡನೆಯೇ ಅವರ ಹೃದಯ ಕರಗಿ ಹೋಗುತ್ತಿತ್ತು. ಆಚಾರ್ಯರ ಕರುಣಾಪೂರ್ಣ ಹೃದಯಕ್ಕೆ ನಿದರ್ಶನ ಪ್ರಾಯವಾದ ಹಲವಾರು ಘಟನೆಗಳನ್ನು ಅವರ ಬಾಲ್ಯಜೀವನದಲ್ಲೇ ನಾವು ಕಾಣಬಹುದು. ಅತಿ ದಾರುಣವಾದ ದಾರಿದ್ರ್ಯದಲ್ಲಿ ನರಳುತ್ತಿದ್ದರೂ, ಭಕ್ತಿ ಶ್ರದ್ಧೆಗಳಿಂದ ತಮಗೆ ಒಣಗಿದ ನೆಲ್ಲಿಕಾಯನ್ನು ಭಿಕ್ಷೆಯಾಗಿತ್ತ ಹೆಂಗಸನ್ನು ಕಂಡು ಅವರ ಹೃದಯ ಅಪಾರಕರುಣೆಯಿಂದ ಕರಗಿ ಹೋಯಿತು. ಲಕ್ಷ್ಮಿಯನ್ನು ಸ್ತೋತ್ರ ಮಾಡಿ ಅವಳ ದೊಗಸೆಗೆ ಬಂಗಾರದ ನೆಲ್ಲಿಕಾಯಿಗಳ ಧಾರಾಕಾರವಾದ ಸುರಿಮಳೆಗರೆದರು. ವಯೋವೃದ್ಧೆಯಾದ ತಾಯಿ ನದಿಗೆ ನಡೆದು ಹೋಗಲು ಅಶಕ್ತಳೆಂದು ಮರುಗಿ, ಅವಳ ಮನೆಯ ಬಳಿಗೇ ಪೂರ್ಣಾನದಿ ಹರಿದು ಬರುವಂತೆ ಮಾಡಿದರು. ಆಶ್ರಮ ಧರ್ಮಕ್ಕೆ ವಿರುದ್ಧವಾದರೂ ತಾಯಿಯ ಮೇಲಿನ ಪ್ರೀತಿ -- ಕನಿಕರಗಳಿಂದ ಪ್ರೇರಿತರಾಗಿ ಅಂತ್ಯಕ್ರಿಯೆಗಳನ್ನು ಮಾಡಿದರು.

ಇದು ಬಾಲ್ಯದ ಕೆಲವು ಘಟನೆಗಳಾದರೆ ಪರಮಹಂಸ ಪರಿವ್ರಾಜಕರಾಗಿ ದಿಗ್ವಿಜಯಕ್ಕೆ ಹೊರಟ ಮೇಲೆ ಕೂಡ ಅವರ ಅಪಾರ ಕರುಣೆಯನ್ನು ತೋರಿಸುವ ಅನೇಕ ನಿದರ್ಶನಗಳು ಬರುತ್ತವೆ. ಕಾಪಾಲಿಕರು ಕೊಡುತ್ತಿದ್ದ ನರಬಲಿ, ಕಂಚೀಕಾಮಾಕ್ಷಿ ದೇವಾಲಯದಲ್ಲಿ ನಡೆಯುತ್ತಿದ್ದ ಪಶುಬಲಿ, ಸೌರಮತೀಯರ ರಕ್ತಗಂಧ ಲೇಪನ, ವೈಷ್ಣವರಲ್ಲಿದ್ದ ತಪ್ತ ಚಿಹ್ನಧಾರಣೆ -- ಮೊದಲಾದುವನ್ನು ತಪ್ಪಿಸಿದುದು ಆಚಾರ್ಯರ ಅಪಾರ ಕರುಣೆ -- ಭೂತದಯೆಗಳನ್ನು ಮಾತ್ರವಲ್ಲದೆ ಸಮಾಜಸುಧಾರಣೆಯಲ್ಲಿನ ಕಳಕಳಿಯನ್ನೂ ಎತ್ತಿ ತೋರಿಸುತ್ತದೆ. ಅವರ ಶಿಷ್ಯರೆಲ್ಲರೂ ಅವರ ಕರುಣೆಯಿಂದ ಅನುಗೃಹೀತರಾದವರು. ಅವರಲ್ಲಿಯೂ ಮಂದಮತಿಯಾದ ಗಿರಿಯನ್ನು ಅವರು ಅನುಗ್ರಹಿಸಿದ ಸನ್ನಿವೇಶ ಅವರ ದಯೆ, ಶಿಷ್ಯವಾತ್ಸಲ್ಯಗಳನ್ನು ಪ್ರಕಟಪಡಿಸುತ್ತವೆ. ಇವೆಲ್ಲಕ್ಕಿಂತ ಮಿಗಿಲಾಗಿ ಶಂಕರರ ಕರುಣಾಹೃದಯವನ್ನು ಬಹು ಚೆನ್ನಾಗಿ ಪ್ರತಿಬಿಂಬಿಸುವ ಸನ್ನಿವೇಶವೆಂದರೆ ಅವರು ಕುಷ್ಠರೋಗಿಯನ್ನು ಅನುಗ್ರಹಿಸಿದುದು. ತಮ್ಮ ಬಂಧು ಜನರಿಂದ ಪರಿತ್ಯಕ್ತನಾಗಿ, ದಾರಿಯಲ್ಲಿ ನರಳುತ್ತ ಬಿದ್ದಿದ್ದ ಆ ರೋಗಿಯ ದೇಹದಿಂದ ಬರುತ್ತಿದ್ದ ದುರ್ಗಂಧವನ್ನು ಸಹಿಸಲಾರದೆ ಶಿಷ್ಯರೆಲ್ಲ ಮೂಗುಮುಚ್ಚಿಕೊಂಡು ದೂರ ಹೋಗುತ್ತಿದ್ದಾಗ, ಶಂಕರರು ಅವರನ್ನೆಲ್ಲ ಗದರಿಸಿ 'ನಾವು ಇಂಥವರಿಗೆ ಸೇವೆ ಮಾಡದೆ ಹೋದರೆ ಹುಟ್ಟಿ ಸಾರ್ಥಕವೇನು?' ಎಂದು ಆ ರೋಗಿಯನ್ನು ಪ್ರೀತ್ಯಾದರಗಳಿಂದ ಮೈದಡವಿದ ಸನ್ನಿವೇಶ ಹೃದಯಸ್ಪರ್ಶಿಯಾದುದು. ಇಂತಹ ಮಹನೀಯರನ್ನು 'ಶ್ರುತಿಸ್ಮೃತಿ ಪುರಾಣಾನಾಮಾಲಯಂ ಕರುಣಾಲಯಂ' ಎಂದು ವರ್ಣಿಸಿರುವುದು ಅತಿಶಯೋಕ್ತಿಯೇನಲ್ಲ; ಅಕ್ಷರಶಃ ವಾಸ್ತವ.

## ರಾಷ್ಟ್ರೀಯ ಏಕತೆಯ ಹರಿಕಾರ :

ಆಚಾರ್ಯರಲ್ಲಿ ನಾವು ಗಮನಿಸಬೇಕಾದ ಅತ್ಯಾಧುನಿಕವೆಂದು ಹೇಳಬಹುದಾದ ಗುಣವೆಂದರೆ ಅವರ ಅಪಾರ ದೇಶಭಕ್ತಿ, ಪ್ರಜಾವಾತ್ಸಲ್ಯ. ಆಸೇತುಹಿಮಾಚಲಪರ್ಯಂತ ಭರತಖಂಡದಲ್ಲಿರುವ ಎಲ್ಲ ಜನ ಸಮುದಾಯವೂ ಸುಖಶಾಂತಿಗಳಿಂದ ಜೀವಿಸುತ್ತಿರಬೇಕೆಂಬುದೇ ಇವರ ಜೀವಿತಾದರ್ಶ. 'ಉದಾರಚರಿತಾನಾಂ ತು ವಸುಧೈವಕುಟುಂಬಕಮ್' ಎಂಬುದೇ ಇವರ ಧ್ಯೇಯ. ಇವರು ವಿಶ್ವಕುಟುಂಬಿ; ಎಲ್ಲರೂ ತಮ್ಮ ಮಕ್ಕಳೇ; ಅವರ ಹಿತಕ್ಕಾಗಿಯೇ ತಮ್ಮ ಬಾಳು -- ಎಂಬ ಭಾವನೆ ಅವರದು. ಈ ಉದ್ದೇಶ್ಯ ಸಾಧನೆಗಾಗಿ ದೇಶದಲ್ಲೆಲ್ಲ ಅನೇಕ ಬಾರಿ ಸಂಚರಿಸಿ, ಜನರಿಗೆ ಹಿತೋಪದೇಶ ಮಾಡುತ್ತಾ, ತಮ್ಮ ಜೀವನವನ್ನು ಸವೆಸಿದರು. ಅಖಂಡಭಾರತದ ಕಲ್ಪನೆ ಶಾಶ್ವತವಾಗಿ ನಿಲ್ಲುವಂತೆ ಮಾಡಲು ಭರತಖಂಡದ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಆಮ್ನಾಯಪೀಠಗಳನ್ನು ಸ್ಥಾಪಿಸಿದರು. ಉತ್ತರದ ಸುರೇಶ್ವರರನ್ನು ದಕ್ಷಿಣದ ಶೃಂಗೇರಿಯ ಮಹಾಪೀಠದ ಮೇಲೆ ಹಾಗೂ ದಕ್ಷಿಣದ ತೋಟಕಾಚಾರ್ಯರನ್ನು ಉತ್ತರದ ಬದರೀ ಪೀಠದ ಮೇಲೆ ಪ್ರತಿಷ್ಠಾಪಿಸಿ ಭಾರತದ ರಾಷ್ಟ್ರೀಯ ಏಕತೆಯನ್ನು, ಭಾವನಾತ್ಮಕ ಏಕತಾನತೆಯನ್ನು ಸಾರಿದ ಮಹಾತ್ಮರು ಶಂಕರರು.

ಅವರೂ ದಾಕ್ಷಿಣಾತ್ಯರ ಪ್ರತಿಷ್ಠೆಗೆ ಕುಂದುಬರುವ ಸನ್ನಿವೇಶ ಒದಗಿದಾಗ ತಾವು ದಾಕ್ಷಿಣಾತ್ಯರೆಂಬುದನ್ನು ಅವರು ಮರೆಯಲಿಲ್ಲ. ಕಾಶ್ಮೀರದಲ್ಲಿ ಶಾರದಾಪೀಠದ ದಕ್ಷಿಣದ ಮಹಾದ್ವಾರವನ್ನು ಯಾವ ದಾಕ್ಷಿಣಾತ್ಯಪಂಡಿತನೂ ತನ್ನ ಪಾಂಡಿತ್ಯದ ಪ್ರಭಾವದಿಂದ ತೆರೆಸಲಿಲ್ಲವಾದ ಕಾರಣ ಅದು ಮುಚ್ಚಿಯೇ ಇದೆ ಎಂಬ ವಾರ್ತೆ ಅವರ ಕಿವಿಗೆ ಬಿದ್ದ ಕೂಡಲೇ ಅವರ ಸ್ವಾಭಿಮಾನ ಕೆರಳಿತು. 'ದಕ್ಷಿಣ ದೇಶ ಅಷ್ಟೊಂದು ಬರಡೆ? ಇರಲಿ; ನಾನು ದಕ್ಷಿಣದೇಶದ ಕೀರ್ತಿ-- ಗೌರವಗಳನ್ನು ಪ್ರತಿಷ್ಠಾಪಿಸಿ ಬರುತ್ತೇನೆ'-- ಎಂದು ನಿಶ್ಚಯಿಸಿ ಅಲ್ಲಿಗೆ ಹೋಗಿ, ಅಲ್ಲಿನ ದಕ್ಷಿಣ ದ್ವಾರವನ್ನು ತೆರೆಯಿಸಿದುದು ಮಾತ್ರವಲ್ಲ, ಅಲ್ಲಿದ್ದ ಎಲ್ಲ ಪಂಡಿತರನ್ನೂ ವಾದದಲ್ಲಿ ಸೋಲಿಸಿ ಸರ್ವಜ್ಞಪೀಠಾರೋಹಣ ಮಾಡಿದರು. ಈ ವಿಚಾರ ಎಲ್ಲ ದಾಕ್ಷಿಣಾತ್ಯರಿಗೂ ಹೆಮ್ಮೆ ತರುವಂತಹುದು. ಆಚಾರ್ಯರು ತಮ್ಮ ಅಲ್ಪ ಅವಧಿಯ ಜೀವಿತದಲ್ಲಿ ಮಾಡಿದ ಸಮಾಜ ಸುಧಾರಣೆ -- ರಾಷ್ಟ್ರೀಯ ಸಂಘಟನೆಗಳನ್ನು ಕಾನೂನುಗಳ ಮೂಲಕ ಒಂದೆರಡು ಶತಮಾನಗಳ ಅವಧಿಯಲ್ಲೂ ಕೂಡ ಸಾಧಿಸಲು ಸಾಧ್ಯವಿಲ್ಲ. ಆಚಾರ್ಯರು ಅದನ್ನು ಕೇವಲ ವರ್ಷಗಳಲ್ಲಿ ಸಾಧಿಸಿದರು. ಏಕೆಂದರೆ ಅವರು ಅನುಸರಿಸಿದ ಮಾರ್ಗ ದಯೆಯ ಮಾರ್ಗ; ಕರುಣೆಯ ಮಾರ್ಗ; ಕಾನೂನಿನ ಬಲಪ್ರಯೋಗವಲ್ಲ.

## ಸಮನ್ವಯದೃಷ್ಟಿ :

ಶಂಕರರು ತಾವು ನಡೆಸುತ್ತಿದ್ದ ಆಧ್ಯಾತ್ಮಿಕ ಚಿಂತನೆಯ ಜತೆಗೆ ನಿರಂತರ ದುಡಿಮೆ, ಕಾರ್ಯ ತತ್ಪರತೆಗಳಿಂದ ಅನೇಕ ಮಹತ್ಕಾರ್ಯಗಳನ್ನು ಸಾಧಿಸಿ ದೇಶದ ಎಲ್ಲೆಡೆಯಲ್ಲೂ ಆವರಿಸಿದ್ದ ಅಶಾಂತಿ, ಧಾರ್ಮಿಕ ಕ್ಷೋಭೆಗಳನ್ನು ಕೊನೆಗಾಣಿಸಿ ಭರತಖಂಡದಲ್ಲೆಲ್ಲ ಸುಖ--ಶಾಂತಿಗಳನ್ನು ನೆಲೆಗೊಳಿಸಿದರು. ತಮ್ಮ ಕಾರ್ಯಸಾಧನೆಯಲ್ಲಿ ಇವರು ಗಳಿಸಿದ ಅಸಾಧಾರಣ ಯಶಸ್ಸಿಗೆ ಕಾರಣ ಇವರ ಸಮನ್ವಯ ದೃಷ್ಟಿ. ದೇಶದಲ್ಲಿದ್ದ ದುರಾಚಾರಗಳನ್ನೂ, ದುರ್ಮತಗಳನ್ನೂ ಇವರು ಎದುರಿಸಿದ ರೀತಿ ವಿಧ್ವಂಸಕವಾದುದಲ್ಲ, ರಚನಾತ್ಮಕವಾದುದು. ರೋಗಿಯನ್ನು ಕೊಲ್ಲುವುದು ರೋಗಕ್ಕೆ ಮದ್ದಲ್ಲ. ರೋಗವನ್ನು ವಾಸಿ ಮಾಡಿ ರೋಗಿಯನ್ನು ಆರೋಗ್ಯವಂತನನ್ನಾಗಿಯೂ, ಬಲಿಷ್ಠನನ್ನಾಗಿಯೂ ಮಾಡುವುದೇ ಸರಿಯಾದ ಮಾರ್ಗ; ಹಾಗೆಯೇ ದೇಶದಲ್ಲಿದ್ದ ದುರ್ಮತ--ದುರಾಚಾರಗಳನ್ನು ಖಂಡಿಸುವಾಗ ಆಯಾ ಮತಗಳ ಅನುಯಾಯಿಗಳೇ ಒಪ್ಪುವಂತೆ ಯುಕ್ತಿಯುಕ್ತವಾಗಿ, ಶಾಸ್ತ್ರಸಮ್ಮತವಾಗಿ ಗುಣ--ದೋಷಗಳನ್ನು ವಿಮರ್ಶೆ ಮಾಡಿ, ಆ ಮತಗಳನ್ನು ಸುಧಾರಿಸಿದರಲ್ಲದೆ ಅವನ್ನು ತೊಡೆದುಹಾಕುವ ಪ್ರಯತ್ನ ಮಾಡಲಿಲ್ಲ. ಅವುಗಳೆಲ್ಲವನ್ನೂ ಒಂದು ಅಖಂಡವಾದ ವಿಶಾಲತತ್ತ್ವದ ಆಧಾರದ ಮೇಲೆ ಸಮನ್ವಯ ಮಾಡಿದುದೇ ಇವರ ಯಶಸ್ಸಿಗೆ ಕಾರಣ. ಹೀಗೆ ಅವರಲ್ಲಿದ್ದ ಸರ್ವಮತಸಹಿಷ್ಣುತೆ, ಸರ್ವಧರ್ಮ ಸಮನ್ವಯಗಳು ಅವರ ಆಧುನಿಕ ಮನೋಧರ್ಮವನ್ನು ಪ್ರತಿಬಿಂಬಿಸುತ್ತವೆ. ಈ ವಿಶಾಲ ದೃಷ್ಟಿ, ಈ ಸಮನ್ವಯ ಭಾವನೆಗಳು ಇಂದಿನ ಆಧುನಿಕ ವಿಜ್ಞಾನಯುಗದಲ್ಲಿಯೂ ಬಹು ವಿರಳ. ಈ ದೃಷ್ಟಿಯಿಂದ 'ಆಧುನಿಕತೆ ಕಾಲಮಾನಕ್ಕೆ ಸೇರಿದುದಲ್ಲ; ಅದು ಮನೋಧರ್ಮಕ್ಕೆ ಸೇರಿದುದು' -- ಎಂಬ ಮಾತು ಶ್ರೀ ಶಂಕರರ ವಿಚಾರದಲ್ಲಿಯೂ ನಿಜವೆನಿಸುತ್ತದೆ.

## ಆಚಾರ್ಯರ ಉಪದೇಶ :

ಆಚಾರ್ಯರ ಉಪದೇಶ ಬಹಳ ಸರಳ. ಅವರು ರಚಿಸಿದ ಸ್ತೋತ್ರಗಳಲ್ಲೆಲ್ಲ ಈ ಉಪದೇಶ ಹಾಸುಹೊಕ್ಕಾಗಿದೆ. 'ಮೋಹಮುದ್ಗರ' ಎಂಬ ಹೆಸರಿನ ಭಜಗೋವಿಂದಂ ಸ್ತೋತ್ರದಲ್ಲಿ 'ಗೋವಿಂದಂ ಭಜ ಮೂಢಮತೇ' ಎಂದು ದೇವರಲ್ಲಿ ಭಕ್ತಿ ಇಡಲು ಮಾತ್ರ ಹೇಳಿಲ್ಲ; 'ನೇಯಂ ಸಜ್ಜನ ಸಂಗೇಚಿತ್ತಂ ದೇಯಂ ದೀನ ಜನಾಯ ಚ ವಿತ್ತಂ' -- ಎಂದು ಸಜ್ಜನರ ಸಹವಾಸ ಮಾಡಿ, ದೀನ -- ದಲಿತರಿಗೆ ಹಣ ನೀಡಿ ಸಹಾಯ ಮಾಡಿ -- ಎಂದು ಹೇಳುತ್ತಾರೆ. ಮತ್ತೊಂದು ಶ್ಲೋಕದಲ್ಲಿ 'ಅಂಗಂಗಲಿತಂ ಪಲಿತಂ ಮುಂಡಂ' -- ಎಂದು ಒಬ್ಬ ವಯೋವೃದ್ಧನ ಸುಂದರ ಶಬ್ದಚಿತ್ರ ನೀಡಿ ಆಶೆಯನ್ನು ಬಿಡಿ -- ಎಂದು ಸೂಚ್ಯವಾಗಿ ತಿಳಿಸುತ್ತಾರೆ. 'ಭಗವದ್ಗೀತಾ ಕಿಂಚಿದಧೀತ....' ಎಂದು ಗೀತೆಯಂತಹ ಸದ್ಗ್ರಂಥ ಓದಿ; ಗಂಗೆಯಂತಹ ತೀರ್ಥ ಸೇವನೆ ಮಾಡಿ; ಭಗವಂತನ ಕಡೆಗೆ ಮನಸ್ಸು ಕೊಡಿ -- ಎಂದು ಧಾರ್ಮಿಕ ಜೀವನದ ಕರೆ ನೀಡುತ್ತಾರೆ. 'ಸಾಧನ ಪಂಚಕಂ' ಎಂಬ ಮತ್ತೊಂದು ಸ್ತೋತ್ರದಲ್ಲಿ 'ವೇದೋನಿತ್ಯ ಮಧೀಯತಾಂ....' ಎಂದೆಲ್ಲ ಉಪದೇಶಿಸಿ 'ಸ್ವಾದ್ವನ್ನಂ ನತು ಯಾಚ್ಯತಾಂ ವಿಧಿವಶಾತ್ ಪ್ರಾಪ್ತೇನ ಸಂತುಷ್ಯತಾಂ' -- ಎಂದು ಭೋಗ ಜೀವನ ಬೇಡ; ದೈವದತ್ತವಾಗಿ ನಿಮಗೇನು ದೊರಕಿದೆಯೋ ಅಷ್ಟರಲ್ಲೇ ತೃಪ್ತರಾಗಿ -- ಎಂದು ಬೋಧಿಸುತ್ತಾರೆ. 'ಕೌಪೀನ ಪಂಚಕಂ' ಎಂಬ ಮತ್ತೊಂದು ಸ್ತೋತ್ರದಲ್ಲಿ 'ಕೌಪೀನವಂತಃ ಖಲು ಭಾಗ್ಯವಂತಃ' ಎಂದು ಸರಳ ಜೀವನದ ಕಡೆಗೆ ಗಮನ ಕೊಡಲು ಕರೆ ನೀಡುತ್ತಾರೆ. 'ವಿವೇಕ ಚೂಡಾಮಣಿ'ಯಲ್ಲಿ 'ಜಂತೂನಾಂ ನರಜನ್ಮದುರ್ಲಭಮ್' ಎಂದು ಮನುಷ್ಯಜನ್ಮ ದೊಡ್ಡದು; ಅದನ್ನು ಹಾಳುಮಾಡಿಕೊಳ್ಳದಿರಿ' -- ಎಂದು ಬೋಧಿಸುತ್ತಾರೆ. ಹೀಗೆ ಆಚಾರ್ಯರ ಉಪದೇಶ ಬಹಳ ಸರಳ; ನೇರ. ಅಂದಿಗೆಷ್ಟೋ ಇಂದಿಗೂ ಅಷ್ಟೇ ಉಪಯುಕ್ತ.

ಆಚಾರ್ಯರ ಇಂತಹ ಉಪದೇಶ, ಆಧುನಿಕ ಮನೋಧರ್ಮ, ವಿಶಾಲ ಭಾವನೆ, ಸಮನ್ವಯ ಸೂತ್ರಗಳನ್ನು ನಾವೂ ಮೈಗೂಡಿಸಿಕೊಂಡು ನಮ್ಮ ಬಾಳನ್ನು ಬಂಗಾರಗೊಳಿಸಿಕೊಳ್ಳೋಣ; ಮುಂದಿನ ಪೀಳಿಗೆಗೆ ಶಂಕರರ ಸಂದೇಶವನ್ನು ಸಂರಕ್ಷಿಸುವ ಪ್ರಯತ್ನ ಮಾಡೋಣ; ಅವರ ದಿವ್ಯಜೀವನ ನಮಗೆ ಬೆಳಕಾಗಲಿ; ಅವರು ಕಲ್ಪಿಸಿದ ಅಖಂಡಭಾರತದ ಕಲ್ಪನೆ ನಮ್ಮದಾಗಲಿ; ಅವರು ತೋರಿದ ಜೀವನ ತತ್ತ್ವ ನಮ್ಮನ್ನು ತುಂಬಲಿ.



ಸಂದರ್ಶಿಸಿ. ಆನಂದಿಸಿ.

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.



# ವಾರ್ಷಿಕ ಬ್ರಹ್ಮೋತ್ಸವಗಳು

26--5--93 ರಿಂದ 4--6--93

**ಕಾರ್ಯಕ್ರಮ ವಿವರ**

| ದಿನಾಂಕ | ವಾರ | ಬೆಳಗ್ಗೆ | ಸಂಜೆ |
|---|---|---|---|
| 26--5--93 | ಬುಧವಾರ | ---- | ಅಂಕುರಾರ್ಪಣೆ. |
| 27--5--93 | ಗುರುವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ. |
| 28--5--93 | ಶುಕ್ರವಾರ | ಚಿಕ್ಕ ಶೇಷವಾಹನ | ಹಂಸವಾಹನ. |
| 29--5--93 | ಶನಿವಾರ | ಸಿಂಹವಾಹನ | ಮುತ್ತಿನ ಚಪ್ಪರವಾಹನ. |
| 30--5--93 | ಭಾನುವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ. |
| 31--5--93 | ಸೋಮವಾರ | ಮೋಹಿನೀ ಅವತಾರ | ಗರುಡವಾಹನ. |
| 1--6--93 | ಮಂಗಳವಾರ | ಹನುಮದ್ವಾಹನ | |
| | | ಸಂಜೆ -- ವಸಂತೋತ್ಸವ | ಗಜವಾಹನ. |
| 2--6--93 | ಬುಧವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 3--6--93 | ಗುರುವಾರ | ರಥೋತ್ಸವ | ಅಶ್ವವಾಹನ. |
| 4--6--93 | ಶುಕ್ರವಾರ | ತೀರ್ಥವಾರಿ | ಧ್ವಜಾವರೋಹಣ. |

<u>ಸೂಚನೆ :</u> ಶ್ರೀ ಗೋವಿಂದರಾಜಸ್ವಾಮಿ ದೇವಾಲಯ ತಿರುಪತಿಯ ರೈಲ್ವೆ ನಿಲ್ದಾಣ ಬಸ್ ನಿಲ್ದಾಣಗಳ ಬಳಿಯಲ್ಲಿದೆ. ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳುಂಟು.

ನೀವೂ ಬನ್ನಿ ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ

# ಶ್ರೀಯೋಗಾನರಸಿಂಹ ಸುಪ್ರಭಾತಂ

---ಬಿ. ಎಸ್. ವೇಣುಗೋಪಾಲ್.

ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ
ಸುಂದರಾಕಾರ ಸುರನರ ವಂದಿತನೆ ಶ್ರೀರಂಗನಾಥನೆ
ಸುಪ್ರಭಾತವು ನಿನಗೆ ಭಕ್ತವತ್ಸಲನೆ ಗರುಡ ಗಮನ ಗೋವಿಂದ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ ||1||

ಸುಪ್ರಭಾತವು ನಿನಗೆ ವೇದವೇದಾಂತರಂಗ ವೇದಾದ್ರಿವಾಸ
ಸುರರೆಲ್ಲ ನೆರೆದಿಹರು ನಿನ್ನ ಚರಣಕಮಲಕೆ ನಮಿಸೆ ತವಕದಲಿ,
ಕನಕವರ್ಣನೆ ಕಮಲಾಕ್ಷ ಕರುಣಾಳು ಶ್ರೀನಿವಾಸನೆ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ ||2||

ನೋಡು ನಿನ್ನಾಣತಿಯಂತೆ ಜೀವಕೋಟಿಯ ಸಲಹೆ ಸಡಗರದಿ
ಬರುತಿಹನು ರವಿಯು ಮೂಡಲಲಿ, ನಲಿದಿಹದು ಜೀವಕೋಟಿಯು,
ನಿನ್ನ ಚರಣ ಕಮಲಕೆ ನಮಿಸಿನಡೆಯಲು ಬಂದಿಹನು ರವಿಯು
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ ||3||

ಏಳಯ್ಯ ಅನಂದಗುಣನಿಲಯ ಆದಿಲಕ್ಷ್ಮೀರಮಣ ಹೇ ಶ್ರೀನಿವಾಸ
ಏಳಯ್ಯ ಚರಣಭಜಕರ ಕಾಯ್ವ ಚೆಲುವಚೆನ್ನಿಗನೆ ಸಾರಂಗಧರನೇ
ಏಳು ಏಳಯ್ಯ ಕೇಳು ಪಕ್ಷಿಗಾನಾಮೃತವು ತುಂಬಿಹುದು ಜಗವೆಲ್ಲ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ ||4||

ಸುಪ್ರಭಾತವು ನಿನಗೆ ಆರ್ತತ್ರಾಣ ಪರಾಯಣನೆ ಪ್ರಹ್ಲಾದವರದ
ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕನೆ ಶ್ರೀರಂಗರಂಗ
ಏಳು ಏಳಯ್ಯ ಸಲಹು ಬಾ ಭಕ್ತಕೋಟಿಯ ಭಕ್ತವತ್ಸಲನೆ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ ||5||

ಸಕಲಲೋಕದ ದೆಳಕೆ ಗೀತಗೋವಿಂದ ಶ್ರೀರಮಣ
ಕಲ್ಪತರುವೆ ಕರುಣಾಳು ನರಹರಿಯೆ ಏಳು ಏಳಯ್ಯ
ಪ್ರಹ್ಲಾದವರದನೇ, ಪಾರ್ಥಸಾರಥಿಯೆ, ಸಪ್ತಗಿರಿಗೊಡೆಯನೇ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ ||6||

ಸುಪ್ರಭಾತವು ನಿನಗೆ ಸನಕಸನಂದನವರದ ನಿತ್ಯಶುಭದಾಯಕನೆ
ಏಳಯ್ಯ ಶ್ರೀರಂಗನಾಥನೆ ಕೌಸ್ತುಭಾಭರಣನೆ ಯದುಶೈಲನಾಥ
ಭಕ್ತವತ್ಸಲನೆ ಪರಮಪಾವನ ಚರಣ ಹೇ ಶ್ರೀನಿವಾಸ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ ||7||

ನಿನ್ನನನವರತ ಪೊತ್ತು ತಿರುಗಲು ಬಂದಿಹನು ವೈನತೇಯನು
ವಿನತಾಸುತನ ಸೇವೆಯನ್ನು ಸ್ವೀಕರಿಸಿ ಸಲಹೆಮ್ಮ ಚೆಲುವನಾರಾಯಣನೆ
ಏಳು ಏಳಯ್ಯ ನರಹರಿಯೆ ಲೋಕಕೆಲ್ಲಕು ನೀನೆಗತಿ ನೀನೆಮತಿ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ ||8||

ಕ್ಷೀರಸಾಗರಶಯನ ಏಳಯ್ಯ ನಾರಾಯಣನೆ ನಳಿನನಾಭ,
ಬಾರೆಂದ ಬಾಲಕಗೊಲಿದು ಕಂಬದಲಿ ಬಿಂಬಿಸಿದ ಉಗ್ರನರಸಿಂಹ
ಚೆಂಚುಲಕ್ಷ್ಮೀರಮಣ ಪ್ರಹ್ಲಾದವರದ ವೇದಾದ್ರಿವಾಸ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ ||9||

ತತ್ತರಿಸಿ ತಲ್ಲಣಿಸಿರಲು ಭುವನಬ್ರಹ್ಮಾಂಡ ದೈತ್ಯನಡಿಯಲ್ಲಿ
ನೀನೆಗತಿಯೆಂದೆಲ್ಲ ಶರಣರನು ಕಾಯ್ದವನೆ ನರಹರಿಯೆ
ದೈತ್ಯದಾನವ ಸಂಹಾರಿ ದೇವ ಉಗ್ರನರಸಿಂಹ ಭಕ್ತಭವದೀಯ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ ||10||



ಖಳನ ಗೆಲ್ಲುವವರಿಲ್ಲೆನುತ ಲೋಕಗಳು ಹೆದರಿ ನಡುಗಿರಲು
ನಾರಾಯಣನೆ ಬಾ ಬೆಳಕೇ ಎಂದ ಕಂದನಾ ಕರೆಕೇಳಿ ಬಂದವನೇ
ಕಂಬದಲಿ ಬಿಂಬಿಸುತ ಕ್ಷಣದಿ ದೈತ್ಯನನು ಸಂಹರಿಸಿದಾ ದೇವ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ ||11||

ಮುಪ್ಪದಾಸವರಿಗೆಲ್ಲ ನೀ ಚಂಡಪ್ರಚಂಡ ಮಾರ್ತಾಂಡ
ಅಂಡಜಾ ವಾಹನನೆ ಸಾರಂಗಧರನೇ ಶ್ರೀರಂಗರಂಗ
ದರುಶನವ ನೀಡೇಳು ಭಕ್ತಕೋಟಿಗೆ ಭಕ್ತವತ್ಸಲನೆ ತಿರುವೇಂಕಟೇಶ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ ||12||

ಏಳಯ್ಯ ಕೋಟಿರವಿತೇಜ, ಏಳಯ್ಯ ಕನಕವರ್ಣನೆ
ನೋಡು ಭೂಸುರರು ಕಾದಿಹರು ಮೊಸರು ಬೆಣ್ಣೆಯ ತಂದು
ಕಂದರೊಡಗೂಡಿ ಕಾದಿಹರ ಕೋರಿಕೆಯ ಸಲಿಸೇಳು
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ ||13||

ಶರಣಾಗತ ವತ್ಸಲನೆ ವಾತ್ಸಲ್ಯವಾರಿಧಿಯೇ ಸನಕಸನಂದರಿಗೊಲಿದವನೆ
ಪದ್ಮಪಾಂಚಜನ್ಯ ಕೌಮೋದಕೀ ಸುದರ್ಶನಧರನೇ
ಉರಗಶಯನ ಶ್ರೀಕಾಂತ ಪದುಮನಾಭನೆ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 14 ||

ದೈತ್ಯತಾ ತುಳಿದಿರಲು ವೇದಗಳ ಸಾಗರದ ತಳಕೆ ಸೊಕ್ಕಿನಲಿ
ನೀಬಂದು ಸಲಹಿದೆಯೊ ಮತ್ಸ್ಯರೂಪವ ತಾಳಿ ಕರುಣಾಳು
ಏಳು ಏಳಯ್ಯ ವೇದರಕ್ಷಕನೆ ನಾರಾಯಣನೆ ನರಹರಿಯೆ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 15 ||

ಮಥಿಸಿರಲು ಸಾಗರವ ದೇವದಾನವರೆಲ್ಲ ಸಡಗರದಿ ಸಂಪದಕೆ
ಗಿರಿಯನೆತ್ತಿ ನಿಂತವನೆ ಕೂರ್ಮಾವತಾರಿಯೇ
ಮಂದರಗಿರಿಧಾರಿ ಮಾಧವನೆ ಮಧುಸೂಧನನೆ ಶ್ರೀಹರಿಯೆ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 16 ||

ವಾಸುಕಿಯ ರೋಷದಿಂ ಹಾಲಾಹಲವು ತುಂಬೆ ಜಗವೆಲ್ಲ ಕ್ಷಣದಿ
ನಿನ್ನೊಂದು ಸನ್ನೆಯಲಿ ಹರ ಕುಡಿದು ನೀಲಕಂಠ ತಾನಾದ
ನಿನ್ನ ಸಮಾನರುಂಟೇ ದೇವ ಶ್ರೀರಂಗರಂಗ ಗರುಡಾದ್ರಿವಾಸ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 17 ||

ಸಿರಿಯುದಿಸೆ ನಿನಗೊಲಿದು ಕಲಶಾಮೃತಸಹಿತ, ಸಿರಿರಮಣ ನೀನಾದೆ
ಸುರರಿಗಮೃತವ ಹಂಚಿದೆಯೋ ಮೋಹಿನಿಯ ರೂಪದಿಂ ಮೋಹನನೆ
ಜಗನ್ಮೋಹನನೆ ಸುರಾರ್ಚಿತನೆ ಸಪ್ತಾದ್ರಿವಾಸನೇ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 18 ||

ಅವನಿಯನು ತುಳಿಯೆ ರಕ್ಕಸನು ರೋಷದಲಿ, ಬಂದೆನೀನೋಡೋಡಿ
ದೈತ್ಯನನು ಸಂಹರಿಸಿ ಧಾರುಣಿಯ ಪೊರೆದವನೆ ಶ್ವೇತವರಾಹರೂಪನೆ
ಜಗನ್ನಾಥ ಪಾಲ್ಗಡಲಶಯನ ಪರಮಪಾವನನಾಮ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 19 ||

ಕಂದನನೆ ಬಲಿಕೊಡಲು ದೈತ್ಯತಾ ಗರ್ಜಿಸಲು ರೋಷಾವೇಶದಿಂ
ಕಂದನನು ಪೊರೆಯೆ ರೌದ್ರಾವತಾರಿ ನೀನಾದೆ ಪ್ರಹ್ಲಾದವರದ
ಬ್ರಹ್ಮಾಂಡವನೆ ನಡುಗಿಸಿದನೆ, ಭಕ್ತರಕ್ಷಕನೆ ಭವದೀಯ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 20 ||

ಏಳು ದುಷ್ಟರಕ್ಕಸಹಾರಿ ಶಿಷ್ಟ ತಾಪತ್ರಯಹಾರಿ
ಪ್ರಹ್ಲಾದ ವರದ ಚೆಂಚುಲಕ್ಷ್ಮೀರಮಣ ಪ್ರಸನ್ನ ವೇಂಕಟರಮಣ
ಚೆಲುವ ಚೆನ್ನಿಗನೆ ವೇದಾದ್ರಿವಾಸ ಶ್ರೀರಂಗರಂಗ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 21 ||

ಸುರರ ಸಲಹಲು ವಾಮನನಾದೆ, ಕಮನೀಯ ಗುಣಗಾತ್ರ
ಮೂರಡಿಯ ಯಾಚಿಸುತ ಬಲಿಗೊಲಿದು ಬಾಗಿಲಲಿ ನಿಂತವನೇ
ಕರುಣಾಳು ಕಾರುಣ್ಯಸಿಂಧು ಕಲ್ಯಾಣಗುಣಧಾಮ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 22 ||

ದೈತ್ಯಕ್ಷತ್ರಿಯರ ಸಂಹರಿಸಿ ಬ್ರಹ್ಮತೇಜವ ದೆಳೆಸಿದಾ ಧೀರ
ಶಿಷ್ಟ ರಕ್ಷಣೆಗೆ ವೇಳೆಯಾಯಿತು ನೀನೆದ್ದು ಸಲಹಯ್ಯ
ಭಾರ್ಗವನೆ ಭಾಗವತೋತ್ತಮನೆ ಜಮದಗ್ನಿಸುತನೇ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 23 ||

ಮಾತೆ ಶಿರವನು ತರಿದ ಪಿತೃವಾಕ್ಯಪರಿಪಾಲಕನೆ ಏಳು
ಮತ್ತೆ ಮಾತೆಯ ಪಡೆದವನೆ ಸೋದರರ ಸಂರಕ್ಷಕನೆ ಏಳು
ಏಳಯ್ಯ ಪಿತನ ಕ್ರೋಧವನು ಬಿಡಿಸಿದಾ ಧೀರ ಪರಶುರಾಮನೆ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 24 ||

ಕೌಸಲ್ಯಾತನಯ ಸುಗುಣಾಭಿರಾಮ ಶ್ರೀರಾಮ
ಧೀರಗಂಭೀರ ನಯನ ಮನೋಹರನೆ ಶ್ರೀರಾಮ ಆತ್ಮಾರಾಮ
ಧನುಜವಿರಾಮ ರಘುರಾಮ ದಶರಥಾತ್ಮಜನೆ ಶ್ರೀರಾಮ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 25 ||

ಏಳು ಏಳಯ್ಯ ವಿಶ್ವಾಮಿತ್ರ ಪ್ರಿಯಧನನೆ ಅಹಲ್ಯಾ ಶಾಪಶಮನನೇ
ಮಿಥಿಲಾನಗರಾನಂದ ಸೀತಾಮನೋಲ್ಲಾಸ ಮಂದಸ್ಮಿತವದನ
ನಯನಾಭಿರಾಮ ಆತ್ಮಾರಾಮ ಪರಮಪಾವನ ಚರಣ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 26 ||

ಮೈಥಿಲೀ ವರಮಾಲಾರ್ಪಿತನೆ ಅರವಿಂದ ದಳನೇತ್ರ
ಭಕುತಜನ ಪ್ರೇಮಾದರದಿ ಕಾದಿಹುದು ನಿನ್ನ ದರುಶನಕೆ
ಯೋಗನಿದ್ರೆಯು ಸಾಕು ವರವನೀಡೇಳು ಏಳಯ್ಯ ಶ್ರೀನಿವಾಸನೆ
ಸುಪ್ರಭಾತವು ನಿನಗ ಯದುಶೈಲನಾಥ ಶ್ರೀಯೋಗನರಸಿಂಹ || 27 ||

ಏಳಯ್ಯ ದಶರಥಾತ್ಮಜನೆ ಲಕ್ಷ್ಮಣಾಗ್ರಜನೆ ಏಳಯ್ಯ
ಭರತಾಗ್ನಿ ಹನುಮದಾಶ್ರಿತ ಚರಣ ಪಟ್ಟಾಭಿರಾಮ
ಸಲಹು ನೀನೆಮ್ಮನನವರತ ಶರಣಾಗತವತ್ಸಲನೆ ಶ್ರೀರಾಮ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 28 ||

ಸಾಧುಜನವಿನುತ ರಾಧಾರಮಣ ರುಕ್ಮಿಣೀವಲ್ಲಭನೆ
ಏಳಯ್ಯ ನವನೀತಚೋರ ನಂದಯಶೋದಾಕಂದ ಸತ್ಯಾನಂದ
ಏಳಯ್ಯ ನಿನ್ನ ಜೊತೆಗಾಡಲೈದಿಹುದು ಗೋವಳರ ವೃಂದ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 29 ||

ವಸುದೇವ ದೇವಕೀತನಯ ಕಂಸಚಾಣೂರ ಮರ್ದನನೆ
ಧರ್ಮಜನ ಕುಲದೈವ ಪಾರ್ಥಸಾರಥಿಯೆ ಗೀತಗೋವಿಂದ
ವಿಶ್ವರೂಪಿಯೆ ವಿಶ್ವಾಂಬರನೆ ಸಪ್ತಗಿರಿಗೊಡೆಯ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 30 ||

ಬೌದ್ಧಕಲ್ಕಿಯೇ ದೇವ ಉರಗಶಯನನೆ ಶ್ರೀರಂಗರಂಗ
ಅಸಮಾನಶೂರ ಕ್ಷೀರಸಾಗರಶಯನ ನಾರಾಯಣನೇ
ಭಕ್ತಜನಮಂದಾರ ಶ್ರೀತುಳಸಿ ವನಮಾಲಿ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 31 ||

ತಿರುಶೆಲ್ವನಾರಾಯಣನೆ ಯತಿರಾಜಗೊಲಿದವನೆ
ಏಳುಗಿರಿಗೊಡೆಯನೇ ಹೇ ಶ್ರೀನಿವಾಸ ಶ್ರೀರಮಣ
ಮರುಗಮಲ್ಲಿಗೆ ಜಾಜಿ ಮಾಲೆಗಳ ಸ್ವೀಕರಿಸು ಬಾತಂದೆ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 32 ||

ಭೂಸುರರು ಬಂದಿಹರು ಸಾನುರಾಗದಿ ಪಾಡಿಹರು ಕೇಳಯ್ಯ
ತಂದಿಹರು ವಿಧವಿಧದ ಭಕ್ಷ್ಯಭೋಜ್ಯಗಳ ನಿನಗೆಂದು ಗೋಪಾಲ
ಸ್ವೀಕರಿಸಿ ಹರಸು ಬಾ ಜಗದಾನಂದಕಾರಕನೆ ಭಕ್ತಜನಮನ ಮಂದಾರ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 33 ||

ಸಪ್ತ ಋಷಿಗಳು ಬಂದಿಹರು ಶಿಷ್ಯಕೋಟಿಯ ಕೂಡಿ
ಬೆಳಗುಜಾವದಿ ನಡುಕಟ್ಟಿ ನಿಂದಿಹರು ನಿನ್ನ ಚರಣಸೇವೆಗೆ ಜಪಿಸಿ
ದೇಗೆದ್ದು ಬಾ ತಂದೆ ಪ್ರಹ್ಲಾದವರದನೇ ಭಕ್ತಜನರಕ್ಷಕನೇ ಸಿರಿರಮಣ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 34 ||

ನೋಡು ಸಿಂಧುಗಂಗಾ ಬ್ರಹ್ಮಪುತ್ರಾಲಕನಂದ ಸರಯೂ ಸರಸ್ವತೀ
ಕಪಿಲೆಕಾವೇರಿ ತಾಮ್ರಪರ್ಣೆ ತುಂಗಭದ್ರ ಕೃಷ್ಣಗೋದಾವರೀ
ಸಕಲ ತೀರ್ಥಗಳ ತಂದಿಹರು ನಿನಗಭಿಷೇಕ ಸೇವೆ ಗೊಲವಿನಲಿ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 35 ||

ಕೇಳು ವೇದಘೋಷವದು ನಿನದಿಸಿಹುದು ಭುವಿಬಾನ ತುಂಬಿ--
ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್
ಸಭೂಮಿಂ ವಿಶ್ವತೋವೃತ್ವಾ ಅತ್ಯತಿಷ್ಟದ್ದಶಾಂಗುಲಂ
ಪುರುಷ ಏವೇದಗಂ ಸರ್ವಂ ಯದ್ಭೂತಂ ಯಚ್ಚಭವ್ಯಂ

.................................................................................

ಪಕ್ಷಿಸಂಕುಲವು ಹಾಡಿಹುದು ಉದಯಗೀತೆಯ ಮಾಲೆ
ತುಂಬಿಹುದು ಸುಘೋಷವದು ಭುವನಬ್ರಹ್ಮಾಂಡದಲಿ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 36 ||

ಪಾಲ್ಮೊಸರು ಮಧುಶರ್ಕರಾದಿಗಳ ತಂದಿಹರು ಸುರರೆಲ್ಲ
ಸ್ವಾಮಿ ನಿನಗಭಿಷೇಕವನು ಮಾಡಿ ಜನ್ಮರಾಹಿತ್ಯನೀಡೆಂದು ಬೇಡಿಹರು
ಭಕ್ತರಾಭೀಷ್ಟವನು ಸಲಿಸು ಭಕ್ತಾಭೀಷ್ಟವರದ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 37 ||

ವೃಕ್ಷಸಂಪದವೆಲ್ಲ ಚಾಮರವ ಬೀಸಿಹುದು ತಲೆದೂಗಿ ಸಂತಸದಿ
ಬಂದಿಹನು ಮಾರುತನು ಸುಹಾಸದಲಿ ನಮಿಸಿಹನು
ತೋರೆಮಗೆ ನಿನ್ನರವಿಂದ ಶ್ರೀಚರಣ ಶ್ರೀವೇಂಕಟೇಶ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 38 ||

ವಿಧವಿಧದ ಪಶುವೃಷಭ ಸಂಪದವು ಸೇರಿಹುದು
ಗರುಡಗಮನನೇ ದರುಶನವ ನೀಡೇಳು ಭಕುತರಿಗೆ
ಕೇಳು ಗೆಜ್ಜೆನಾದವಗೈದು ಅಂಬ ಅಂಬಾ ಎಂದು ಕರೆದಿಹುವು
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 39 ||

ಚೆಲುವನಾರಾಯಣನೆ ರಥೋತ್ಸವವು ನಿನಗೆಂದು ಕಾದಿಹುದು
ನೆರೆದಿಹುದು ಬ್ರಹ್ಮಾದಿ ದೇವಗಣ ವೇಳೆಯಾಯಿತು
ದೇಗೆದ್ದು ಬಾ ತಂದೆ ತಿರುಚೆಲುವ ರಥವನೇರುತ ಸಲಹಯ್ಯ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 40 ||

ತೇರನೇರುತ ಮುದದಿ ಯತಿರಾಜವರದನೇ ನೀಡೆಮಗೆ ಮಂಗಳವ
ತೇರನೆಳೆದಿಹ ಭಕ್ತರಾ ಬಾಳರಥವನು ನಡೆಸುಬಾ ತಂದೆ
ಕೇಳದೋ ಜಯಘೋಷ ಮುಗಿಲ ಮುಟ್ಟಿಹುದು ಕೇಳಯ್ಯ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 41 ||

ಕಾದಿಹುದು ಮುಕ್ಕೋಟಿ ದೇವಗಣ ತನುಮನವ
ನಿಲಿಸಿಹನು ವೈನತೇಯನು ನಿನ್ನ ಚರಣಕಮಲದಿ ಮುದದಿ
ಪಕ್ಷಿವಾಹನನೇ ಲಕ್ಷ್ಮೀರಮಣ ಪಾಲ್ಗಡಲ ಶಯನ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 42 ||

ನಿನ್ನ ದಿವ್ಯ ಚರಣವು ಬೆಳಗಲೀ ನೂರುಸಾವಿರ ಕೋಟಿ
ಕೋಟಿ ಬ್ರಹ್ಮಾಂಡ ವರುಷಗಳು ನೀಡಿ ಸನ್ಮಂಗಳವ ಜಗಕೆಲ್ಲ
ಬೆಳಗು ನೀ ಹರುಷದಲಿ ಕೋಟಿ ಶತಕೋಟಿ ರವಿತೇಜನಾಗಿ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 43 ||

ಕೋಟಿ ಸಾವಿರ ಕೋಟಿ ವಸಂತಗಳು ನಿನಗೆ ಸಿರಿರಮಣ ಶ್ರೀಚರಣ
ಸಿರಿದೇವಿಗೋದೆ ನಾಂಚಾರು ರಾಧಾರುಕ್ಮಿಣೀ ಸತ್ಯಪ್ರಿಯನೇ
ರಂಗನಾಥನೆ ಯದುಶೈಲನಾಥ ಚೆಲುವಚೆನ್ನಿಗನೆ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 44 ||

ಪಸರಿಸಲಿ ನಿನ್ನ ನಾಮಾಮೃತವು ಭುವನ ಬ್ರಹ್ಮಾಂಡದಲಿ ಬೆಳಗಿ
ಶತಕೋಟಿ ವರುಷಗಳದಾಟಿ ಅನವರತ ಬೆಳಗಲೀ ನಿನ್ನ ಕೀರುತಿ
ಭಕ್ತಾಭೀಷ್ಟವರದ ನೀನಾಗಿ ಬೆಳಗು ಲೋಕದಾ ಬೆಳಕೆ ಆತ್ಮಾರಾಮ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 45 ||

ಜಯತುಜಯ ಕಲ್ಯಾಣಗುಣಸಿಂಹ ಕದಿರಿ ನರಸಿಂಹ
ಜಯತುಜಯ ನಿನಗೆ ಕರಿಗಿರೀಶ ಶ್ರೀ ಭೋಗಯೋಗಾನರಸಿಂಹ
ಜಯತುಜಯ ಮಹಾಬಲನೆ ಅಹೋಬಿಲವಾಸ ಪ್ರಹ್ಲಾದ ವರದ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 46 ||

ಜಯತುಜಯ ಯದುಶೈಲನಾಥ ಶ್ರೀಯೋಗನರಸಿಂಹ
ಜಯತುಜಯ ಆತ್ಮಾರಾಮ ಕಲ್ಯಾಣಗುಣಧಾಮ ಶ್ರೀರಾಮ
ಜಯತುಜಯ ವೇದಾದ್ರಿನಿಲಯ ಚೆಲುವನಾರಾಯಣನೆ ಶ್ರೀರಮಣ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 47 ||

ಮಂಗಳವು ವೇದವೇದಾಂತರಂಗನಿಗೆ ಶ್ರೀಲಕ್ಷ್ಮೀರಮಣನಿಗೆ ಪಾವನಗೆ
ಮಂಗಳವು ಪ್ರಹ್ಲಾದವರದ ನರಹರಿಗೆ ಮಂಗಳವು ಶ್ರೀವೇಂಕಟೇಶನಿಗೆ
ಮಂಗಳವು ದಾಸಗೋಪಾಲವರದಾತ್ಮಾರಾಮನಿಗೆ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀಯೋಗನರಸಿಂಹ || 48 ||



ಸುಪ್ರಭಾತವಿದ ರಚಿಸಿದನು ದಾಸಗೋಪಾಲ
ಪ್ರಜೋತ್ಪತ್ತಿ ಪಾಲ್ಗುಣದಿ ಶ್ರೀಯೋಗನರಹರಿಯ ದಯದಿ
ಪ್ರೇಮದಲಿ ಇದನೋದಿ ಕೇಳ್ವಸಕಲರಿಗೆ
ಒಲಿದು ನೀಡುವನು ಸಕಲ ಸನ್ಮಂಗಳವ
ನಮ್ಮ ಯದುಶೈಲನಾಥ ಶ್ರೀಯೋಗನರಸಿಂಹ
ಪ್ರಹ್ಲಾದವರದ ಚೆಲುವಚೆನ್ನಿಗರಾಯ




## ಶ್ರೀ ವೇಂಕಟೇಶ ಮಂಗಳಾಶಾಸನಮ್

ಶ್ರಿಯಃ ಕಾಂತಾಯ ಕಲ್ಯಾಣನಿಧಯೇ ನಿಧಯೇಽರ್ಥಿನಾಮ್,
ಶ್ರೀವೇಂಕಟನಿವಾಸಾಯ ಶ್ರೀನಿವಾಸಾಯ ಮಂಗಳಮ್. ೧

ಶ್ರಿಯಃಪತಿಯೂ ಕಲ್ಯಾಣಗುಣಾಕರನೂ, ಅರ್ಥಿ (ಯಾಚಕ) ಗಳಿಗೆ ನಿಧಿಯೂ ಶ್ರೀ ವೇಂಕಟಾಚಲ ನಿವಾಸಿಯೂ ಆದ ಶ್ರೀನಿವಾಸ! ನಿನಗೆ ಮಂಗಳವು.

ಪರಮ ಮಂಗಳ ಸ್ವರೂಪಿಯಾದ ಶ್ರೀಮನ್ನಾರಾಯಣನಿಗೆ ಮಂಗಳವನ್ನು ಆಶಂಸನೆ ಮಾಡುವುದು ಭಕ್ತರ ಭಕ್ತಿಯ ಪರಾಕಾಷ್ಠೆ. ಪರಮಾತ್ಮನಿಗೆ ಮಂಗಳವನ್ನು ಆಶಂಸನೆ ಮಾಡಿದವರು ಇವರು ಮಾತ್ರವೇ ಅಲ್ಲ. ಹಿಂದಿನಿಂದಲೂ ಭಕ್ತೋತ್ತಮರು ಈ ಪದ್ಧತಿಯನ್ನು ಅನುಸರಿಸಿದ್ದಾರೆ, ಶ್ರೀ ವಿಷ್ಣುಚಿತ್ತರು (ಪೆರಿಯಾಳ್ವಾರ್) ಈ ಸಂಪ್ರದಾಯದ ಆಚಾರ್ಯರೆಂದು ಹೇಳಬಹುದು. ಅವರು ಪರಮಾತ್ಮನ ಕೃಪಾವಿಶೇಷದಿಂದ ತತ್ತ್ವವಿಚಾರದಲ್ಲಿ ವಿಜಯವನ್ನು ಪಡೆದಾಗ ವಿಶೇಷವಾದ ರಾಜಸನ್ಮಾನವು ಲಭಿಸಿತಂತೆ; ಆ ಸಮಯದಲ್ಲಿ ಪರಮಾತ್ಮನು ವಿಜಯಿಗಳಾಗಿ ಬರುತ್ತಿರುವ ಆಚಾರ್ಯರ ದೃಷ್ಟಿಗೆ ಗೋಚರಿಸಿದನಂತೆ; ಆಗ ಆ ದಿವ್ಯ ಮಂಗಳ ವಿಗ್ರಹವನ್ನು ಕಂಡು ಭಾವೋನ್ಮತ್ತರಾದ ವಿಷ್ಣುಚಿತ್ತರು ತಾವು ಕುಳಿತಿರುವ ಆನೆಗೆ ಮಾಡಿರುವ ಅಲಂಕಾರದ ಎರಡು ಗಂಟೆಗಳನ್ನೂ, ಎರಡು ಕೈಗಳಲ್ಲಿಯೂ ಹಿಡಿದುಕೊಂಡು ತಾಳದಂತೆ ಉಪಯೋಗಿಸುತ್ತಾ, ಹಾಡುತ್ತಾ ಮಂಗಳಾಶಾಸನವನ್ನು ಮಾಡಿದಂತೆ. (ಅವರು ಮಾಡಿದ ಮಂಗಳಾಶಾಸನವು ಇಂದಿಗೂ, ಪ್ರತಿಯೊಂದು ವಿಷ್ಣುದೇವಾಲಯದಲ್ಲಿಯೂ ಪ್ರತಿ ನಿತ್ಯವೂ ಮಂಗಳರೂಪವಾಗಿ ಪಾರಾಯಣಮಾಡುವ ಪದ್ಧತಿಯಿದೆ.) ಭಕ್ತಿ ಪರವಶರಾದ ವಿಷ್ಣುಚಿತ್ತರು ಪರಮಾತ್ಮನನ್ನು ಕಂಡು ಮೈಮರೆತರು; ಜೀವನಿಗಿರುವ ಅಲ್ಪಶಕ್ತಿಯನ್ನೂ ಪರಮಾತ್ಮನಿಗಿರುವ ಸರ್ವಶಕ್ತಿಯನ್ನೂ ಮರೆತರು; ತಮ್ಮ ಅಲ್ಪಜ್ಞತೆಯನ್ನೂ ಮರೆತಂತೆ ಪರಮಾತ್ಮನ ಸರ್ವಜ್ಞತೆಯನ್ನೂ ಮರೆತರು; ಹೀಗೆ ಭಕ್ತಿಯಲ್ಲಿ ಎಲ್ಲರನ್ನೂ ಮರೆತು -- 'ಓ ಸುಕುಮಾರ! ಕಲಿಭೂಯಿಷ್ಠವಾದ ಈ ಲೋಕಕ್ಕೆ ನೀನೇಕೆ ಬಂದೆ? ಇಲ್ಲಿ ನಿನಗೆ ತೊಂದರೆಯಲ್ಲವೆ? ಜಗನ್ಮೋಹನನಾದ ನಿನ್ನ ಕೋಮಲತಮವಾದ ರೂಪಕ್ಕೆ ಭಂಗಬರುವುದಲ್ಲವೆ? ಎಂದೆಂದಿಗೂ ನಿನಗೆ ಮಂಗಳವಿರಲಿ' ಎಂದು ಹಾಡಿದರು. ಇಷ್ಟು ಸುಂದರವಾದ ಭಾವವಿರುವುದರಿಂದಲೇ ಆ ಮಂಗಳಾಶಾಸನವು ಯಾವ ಭಾಷೆಯಲ್ಲಿಯೇ ಇರಲಿ, ಪ್ರಾಶಸ್ತ್ಯವನ್ನು ಪಡೆದಿದೆ. ಅದರಂತೆ ಶ್ರೀ ವೇಂಕಟೇಶನ ಮಂಗಳಾಶಾಸನವೂ ರಮ್ಯವಾಗಿದೆ.

ಲಕ್ಷ್ಮೀ ಸವಿಭ್ರಮಾಲೋಕ ಸುಭ್ರೂವಿಭ್ರಮ ಚಕ್ಷುಷೇ
ಚಕ್ಷುಷೇ ಸರ್ವಲೋಕಾನಾಂ ವೇಂಕಟೇಶಾಯ ಮಂಗಳಮ್ ೨

# ಶ್ರೀವೆಂಕಟೇಶ್ವರ ಸುಪ್ರಭಾತ



ಜಗತ್ತಿನ ಯೋಗಕ್ಷೇಮವು ಜಗದೀಶ್ವರನಿಗೆ ಸೇರಿದುದು. ಪ್ರಪಂಚದ ಮಾತಾಪಿತೃಗಳಾದ ಲಕ್ಷ್ಮೀ ನಾರಾಯಣರಿಗೆ ಸೇರಿದುದು. ಅವರಿಬ್ಬರ ಸಾಮರಸ್ಯವೇ ಜಗತ್ತಿನ ಮಂಗಳ; ವಿರಸವೇ ಮಂಗಳೇತರ. ಜಗತ್ಪಾಲನೆಯಲ್ಲಿ ಜಗನ್ಮಾತೆಯ ಜವಾಬ್ದಾರಿಯೇ ಹೆಚ್ಚಿನದು. ಆದುದರಿಂದಲೇ ಪರಮಾತ್ಮನೂ ಸಹ ತನ್ನ ಅಧಿಕಾರವನ್ನು ನಡೆಸುವಾಗ ಶ್ರೀದೇವಿಯ ಇಂಗಿತವನ್ನು ಅವಳ ಅಪಾಂಗ ವೀಕ್ಷಣದಿಂದಲೇ ಅರಿತು ನಡೆಸುವನು. ಹಾಗೆ ನಡೆಸುವುದರಿಂದಲೇ ಅವನು ಸರ್ವಲೋಕಗಳಿಗೂ ಕಣ್ಣಾಗಿರುವನು; ಜಗದ್ರಕ್ಷಕನೆಂಬ ಹೆಸರನ್ನು ಪಡೆದಿರುವನು. ಅಂತಹ ಜಗದ್ರಕ್ಷನಾದ ಶ್ರೀ ವೇಂಕಟೇಶ! ನಿನಗೆ ಮಂಗಳವು.

ಶ್ರೀ ವೇಂಕಟಾದ್ರಿಶೃಂಗಾಗ್ರಮಂಗಳಾಭರಣಾಂಘ್ರಯೇ,
ಮಂಗಳಾನಾಂ ನಿವಾಸಾಯ ವೇಂಕಟೇಶಾಯ ಮಂಗಳಮ್. ೩

ಶ್ರೀ ವೇಂಕಟಾಚಲದ ಶಿಖರಕ್ಕೆ ಮಂಗಳಾಭರಣವಾದ ಪಾದಗಳುಳ್ಳವನೂ, ಶುಭಕ್ಕೆ ವಾಸಸ್ಥಾನನೂ ಆದ ಶ್ರೀನಿವಾಸ! ನಿನಗೆ ಮಂಗಳವು.

ಸರ್ವಾವಯವಸೌಂದರ್ಯ ಸಂಪದಾ ಸರ್ವಚೇತಸಾಮ್,
ಸದಾ ಸಂಮೋಹನಾಯಾಸ್ತು ವೇಂಕಟೇಶಾಯ ಮಂಗಳಮ್. ೪

ಎಲ್ಲ ಅವಯವಗಳ ಸೌಂದರ್ಯ ಸಂಪತ್ತಿನಿಂದ ಸರ್ವ ಚೇತನರಿಗೂ ಸರ್ವದಾ ಮೋಹನನಾದ ವೇಂಕಟೇಶ! ನಿನಗೆ ಮಂಗಳವು.

ಭಕ್ತ ಶ್ರೇಷ್ಠನಾದ ಕೂರನಾಥನು ಶತ್ರುಗಳಿಂದ ಕಣ್ಣನ್ನು ಕಳೆದುಕೊಂಡನು. ಆದರೂ ವರದರಾಜ ಸನ್ನಿಧಿಯಲ್ಲಿ "ವರದರಾಜಸ್ತವ" (ತನ್ನಿಂದಲೇ ರಚಿತವಾದ ಸ್ತೋತ್ರ) ವನ್ನು ಹಾಡುತ್ತಿರಲು ಪರಮಾತ್ಮನ ದಿವ್ಯದರ್ಶನಕ್ಕೆ ಅನುಕೂಲಿಸುವಂತೆ ಆತನಿಗೆ ದೃಷ್ಟಿಪಾಟವ ಉಂಟಾಯಿತು. ಆದರೆ, ಪರಮಾತ್ಮನ ದಿವ್ಯದರ್ಶನವನ್ನು ಪಡೆದ, ತಾನು ಮತ್ತೊಂದನ್ನು ನೋಡಬಾರದೆಂಬ ಭಾವನೆಯಿಂದ ಬಾಹ್ಯಚಕ್ಷುವನ್ನು ಆತನು ಪಡೆಯಲು ಇಷ್ಟಪಡಲಿಲ್ಲ. ಹೀಗೆಯೇ ಅನೇಕ ಭಕ್ತರು ಪರಮಾತ್ಮನ ದಿವ್ಯಮಂಗಳ ವಿಗ್ರಹದ ಸೌಂದರ್ಯಾತಿಶಯವನ್ನು ಅನುಭವಿಸಿದ ಮೇಲೆ ಮತ್ತೆ ಯಾವುದನ್ನೂ ನೋಡಲಾರದಿದ್ದರೆಂಬ ವಿಷಯವು ಪ್ರಸಿದ್ಧವಾಗಿದೆ. ಹಾಗೆಯೇ ಶ್ರೀ ವೇಂಕಟೇಶನ ಮುದ್ದಾಗಿಯೂ, ಮಂಗಳಕರವಾಗಿಯೂ ಇರುವ ರೂಪವು ಜಗನ್ಮೋಹಕವೆಂಬುದಕ್ಕೆ ಇಂದಿಗೂ ದೇಶದ ಮೂಲೆ ಮೂಲೆಗಳಿಂದಲೂ ಗುಂಪುಗುಂಪಾಗಿ ಬರುತ್ತಿರುವ ಯಾತ್ರಾರ್ಥಿಗಳೇ ನಿದರ್ಶನ. ಅಂತಹ ಜಗನ್ಮೋಹನಾಕಾರನಾದ ವೇಂಕಟೇಶ! ನಿನಗೆ ಮಂಗಳವು.

ನಿತ್ಯಾಯ ನಿರವದ್ಯಾಯ ಸತ್ಯಾನಂದಚಿದಾತ್ಮನೇ,
ಸರ್ವಾಂತರಾತ್ಮನೇ ಶ್ರೀ ಮದ್ವೇಂಕಟೇಶಾಯ ಮಂಗಳಮ್. ೫

ನಿತ್ಯನೂ ನಿರವದ್ಯನೂ (ದೋಷರಹಿತನೂ) ಸಚ್ಚಿದಾನಂದಾತ್ಮಕನೂ ಸರ್ವಾಂತರ್ಯಾಮಿಯೂ ಆದ ಶ್ರೀಮದ್ವೇಂಕಟೇಶ! ನಿನಗೆ ಮಂಗಳವು.

ಪರಮಾತ್ಮನು ನಿತ್ಯನೆಂದರೆ ಅಚಿತ್ (ಜಡ) ಪದಾರ್ಥಗಳಂತೆ ಸ್ವರೂಪ ಪರಿವರ್ತನೆಯುಳ್ಳವನಾಗಿಯಾಗಲಿ, ಚಿತ್ (ಜೀವಗಳು) ಪದಾರ್ಥಗಳಂತೆ ಸ್ವಭಾವ ಪರಿವರ್ತನೆಯುಳ್ಳವನಾಗಿಯಾಗಲಿ ಅಲ್ಲ. ಹೇಯ ಗುಣರಹಿತನು; ಸಚ್ಚಿದಾನಂದಾತ್ಮಕನು; (ಸತ್ಯಸ್ವರೂಪನೆಂದರೆ ಶಾಶ್ವತವಾದ ಸ್ಥಿತಿಯುಳ್ಳವನು; ಕರ್ಮದಿಂದುಂಟಾಗುವ ಜನನ ಮರಣಾದಿಗಳ ಹಿಡಿತಕ್ಕೆ ಸಿಲುಕದವನು. ಚಿತ್ ಸ್ವರೂಪನೆಂದರೆ ಸ್ವತಃ ಪ್ರಕಾಶಕನಾಗಿ ನಿತ್ಯಜ್ಞಾನವುಳ್ಳವನು. ಆನಂದಾತ್ಮಕನೆಂದರೆ, ಶುದ್ಧ ಸತ್ವಮಯವಾದ ಆನಂದವುಳ್ಳವನು). ಸರ್ವಾಂತರ್ಯಾಮಿ ಎಂದರೆ, ಎಲ್ಲ ಪದಾರ್ಥಗಳಲ್ಲಿಯೂ ವ್ಯಾಪಿಸಿರುವವನು. 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಎಂಬ ಶ್ರುತಿಯ ಆಧಾರದಿಂದ ಪರಮಾತ್ಮನು ಪದಾರ್ಥಗಳ ಒಳಗೂ, ಹೊರಗೂ ಸೇರಿಸಿಕೊಂಡಿರುವನು. 'ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟಃ' ಎಂದು ಗೀತೆಯಲ್ಲಿ ಹೇಳಿರುವಂತೆ ಎಲ್ಲ ಪದಾರ್ಥಗಳಲ್ಲಿಯೂ ನೆಲೆಸಿ, ಅವುಗಳಿಗೆ ಒಂದು ಸ್ವರೂಪಯೋಗ್ಯತೆಯನ್ನುಂಟು ಮಾಡುವವನು. ಅಂತಹ ಶ್ರೀ ವೇಂಕಟೇಶನಿಗೆ ಮಂಗಳವು.

ಸ್ವತಸ್ಸರ್ವವಿದೇ ಸರ್ವಶಕ್ತಯೇ ಸರ್ವಶೇಷಿಣೇ,
ಸುಲಭಾಯ ಸುಶೀಲಾಯ ವೇಂಕಟೇಶಾಯ ಮಂಗಳಮ್. ೬

ಸರ್ವಜ್ಞನೂ, ಸರ್ವಶಕ್ತನೂ ಸರ್ವಶೇಷಿಯೂ, ಸುಲಭನೂ, ಸುಶೀಲನೂ ಆದ ವೇಂಕಟೇಶ! ನಿನಗೆ ಮಂಗಳವು.

ಪರಮಾತ್ಮನು ಸರ್ವಜ್ಞ; ಎಲ್ಲವನ್ನೂ ಬಲ್ಲವನು ಸರ್ವಶಕ್ತ; ಎಲ್ಲ ತರಹದ ಶಕ್ತಿಯುಳ್ಳವನು. 'ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನ ಬಲಕ್ರಿಯಾ ಚ' -- ಆತನ ಶಕ್ತಿಯು ಅನ್ಯಾದೃಶವಾದುದು, ಅಸದೃಶವಾದುದು, ಅನಂತವಾದುದು. ಆತನ ಜ್ಞಾನ ಶಕ್ತಿ ಕ್ರಿಯೆಗಳು ಸ್ವಾಭಾವಿಕವಾದವು. ಆತನು ಸರ್ವಶೇಷಿ -- ಎಂದರೆ ಎಲ್ಲರಿಗೂ ಏಕಮಾತ್ರನಾದ ಪ್ರಭು. ಇದರೂ ಎಲ್ಲರಿಗೂ 'ಸುಲಭ'. ಆತನ ಸೌಲಭ್ಯವೇನೆಂದರೆ, ಕಾಲ ದೇಶಗಳನ್ನರಿತು ಭಕ್ತರನ್ನು ಅನುಗ್ರಹಿಸಲು ಪರಮ ಕರುಣೆಯಿಂದ ರೂಪಾಂತರವನ್ನು ಪರಿಗ್ರಹಿಸುವುದು. ಪರವಾಸುದೇವನಾಗಿ ಅಂಚಿತ್ಯ ಮಹಿಮನಾಗಿರುವವನು. ಚೇತನರ ದುರ್ಗತಿಯನ್ನು ಕಂಡು ಅವರಿಗೆ ದೇಹ, ಇಂದ್ರಿಯಾದಿಗಳನ್ನು ಕೊಟ್ಟು ಸದ್ಗತಿಯನ್ನು ದೊರಕಿಸುವುದಕ್ಕಾಗಿ ತನ್ನ 'ಪರತ್ವ'ವನ್ನು ಬಿಟ್ಟು 'ವ್ಯೂಹ' (ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣರಾದ ಪ್ರದ್ಯುಮ್ನ, ಅನಿರುದ್ಧ, ಸಂಕರ್ಷಣ ರೂಪವನ್ನು) ರಚಿಸಿಕೊಂಡನು. ಅದರಿಂದಲೂ ಚೇತನರೂ ಆತ್ಮೋದ್ಧಾರವನ್ನು ಮಾಡಿಕೊಳ್ಳಲಾರದಿದ್ದಾಗ, ಪಳಗಿದ ಆನೆಯು, ಕಾಡಾನೆಗಳನ್ನು ಹಿಡಿದು ಪಳಗಿಸುವಂತೆ

ಚೇತನರ ಮಧ್ಯೆ ತಾನೂ ಅವರಂತೆಯೇ ಇದ್ದು, ತನ್ನ ಉತ್ತಮವಾದ ಆಚರಣೆಗಳಿಂದಲಾದರೂ ತಮ್ಮನ್ನು ಉದ್ಧರಿಸಿಕೊಳ್ಳಲೆಂದು ಶ್ರೀ ರಾಮಕೃಷ್ಣಾದಿ ರೂಪಗಳಿಂದ ಅವತರಿಸಿದನು. ಇಂತಹ ಅವತಾರಗಳನ್ನು 'ವಿಭವ' ವೆಂದು ಕರೆಯುತ್ತಾರೆ. ಇಂತಹ ಅತ್ಯುತ್ತಮವಾದ 'ವಿಭವ'ಗಳಲ್ಲಿಯೂ ಚೇತನರು ಆತನನ್ನು ಸಾಮಾನ್ಯ ಮನುಷ್ಯನೆಂದು ತಿಳಿದರೇ ಹೊರತು ಅವನ ಮಹಿಮೆಯನ್ನು ಅರಿತುಕೊಳ್ಳಲಿಲ್ಲ. ತಮ್ಮನ್ನು ಕೃತಕೃತ್ಯರನ್ನಾಗಿ ಮಾಡಿಕೊಳ್ಳಲಿಲ್ಲ. ಹೀಗಿರುವಲ್ಲಿ ಎಲ್ಲರಲ್ಲಿಯೂ ಅಂತರ್ಗತನಾಗಿರುವ (ಅಂತರ್ಯಾಮಿಯಾಗಿರುವ) ಪರಮಾತ್ಮನನ್ನು -- ಪ್ರೇರಕನಾಗಿಯೂ, ಸಾಕ್ಷೀಭೂತನಾಗಿಯೂ ಇರುವ ಪರಮಾತ್ಮನನ್ನು ಹೇಗೆ ತಾನೇ ತಿಳಿದುಕೊಂಡಾರು? ಆದುದರಿಂದ ಪರಮಾತ್ಮನು ಆಯಾ ಪವಿತ್ರ ಕ್ಷೇತ್ರಗಳಲ್ಲಿ ಭಕ್ತರ ಭಾವನೆಗೆ ಅನುಸಾರವಾಗಿ, ಶ್ರೀ ವೇಂಕಟೇಶ, ರಂಗನಾಥನೇ ಮೊದಲಾದ ಆರ್ಚಾರೂಪಿಯಾಗಿ ನೆಲೆಸಿ ನಿಂತಿರುವನು. ಹೀಗೆ ಚೇತನರನ್ನು ಉದ್ಧರಿಸಲು ಪರ, ವ್ಯೂಹ, ವಿಭವ, ಅಂತರ್ಯಾಮಿ ಮತ್ತು ಆರ್ಚಾವತಾರಿಯಾಗಿ ತನ್ನ ಸೌಲಭ್ಯವನ್ನು ಪ್ರಕಟಿಸಿಕೊಂಡನು. ಅಷ್ಟು ಸುಲಭನೂ ಸುಶೀಲನೂ ಆದ ವೇಂಕಟೇಶನಿಗೆ ಮಂಗಳವು.

ಪರಸ್ಮೈಬ್ರಹ್ಮಣೇ ಪೂರ್ಣಕಾಮಾಯ ಪರಮಾತ್ಮನೇ,
ಪ್ರಯುಂಜೇ ಪರತತ್ತ್ವಾಯ ವೇಂಕಟೇಶಾಯ ಮಂಗಳಮ್. ೭

ಪರಬ್ರಹ್ಮನೆಂದೂ, ಪರಮಾತ್ಮನೆಂದೂ, ಪರತತ್ತ್ವವೆಂದೂ ತಿಳಿಯಲ್ಪಟ್ಟಿರುವ ಪೂರ್ಣಕಾಮನಾದ ವೇಂಕಟೇಶನಿಗೆ ಮಂಗಳವು.

"ನಾರಾಯಣಪರಂ ಬ್ರಹ್ಮತತ್ತ್ವಂ
ನಾರಾಯಣಃ ಪರಃ..... ಆತ್ಮಾನಾರಾಯಣಃ ಪರಃ"

--ಎಂಬ ಶ್ರುತಿಯು ಶ್ರೀಮನ್ನಾರಾಯಣನೇ ಪರಬ್ರಹ್ಮನೆಂದೂ, ಪರತತ್ತ್ವವೆಂದೂ ಪರಮಾತ್ಮನೆಂದೂ ಘೋಷಿಸುತ್ತದೆ. ಆದುದರಿಂದಲೇ ಆತನು 'ಪೂರ್ಣಕಾಮನು' 'ಸಮಸ್ತವನ್ನೂ ಪಡೆದಿರುವನು'. ಗೀತೆಯಲ್ಲಿ -- "ನಾನವಾಪ್ತಮವಾಪ್ತವ್ಯಂ ತ್ರಿಷು ಲೋಕೇಷು ಕಿಂಚನ (ಮೂರು ಲೋಕಗಳಲ್ಲಿಯೂ ನಾನು ಪಡೆಯದೆ ಇರುವುದಾಗಲಿ, ಪಡೆಯ ಬೇಕಾದುದೇ ಆಗಲಿ, ಯಾವುದೂ ಅಲ್ಲ.) ಎಂದು ಹೇಳಿರುವಂತೆ ಅವನು ಸಮಸ್ತಕಾಮನು. ಅಂತಹ ವೇಂಕಟೇಶನಿಗೆ ಮಂಗಳವು.

ಅಕಾಲತತ್ತ್ವಮಶ್ರಾನ್ತಮಾತ್ಮನಾಮನುಪಶ್ಯತಾಮ್,
ಅತೃಪ್ತ್ಯಮೃತರೂಪಾಯ ವೇಂಕಟೇಶಾಯ ಮಂಗಳಮ್. ೮

ಕಾಲತತ್ತ್ವದಿಂದ ಹಿಡಿದು ಸಂತತವಾಗಿ ತನ್ನ ದರ್ಶನ ಮಾಡುತ್ತಿರುವ ಚೇತನರಿಗೆಲ್ಲ ಎಷ್ಟು ನೋಡಿದರೂ ನೋಡುತ್ತಲೇ ಇರಬೇಕೆನ್ನುವಂತಹ ಅಮೃತದಂತಹ ರೂಪವುಳ್ಳ ವೇಂಕಟೇಶ! ನಿನಗೆ ಮಂಗಳವು.

ಪ್ರಾಯಸ್ಸ್ವಚರಣೌ ಪುಂಸಾಂ ಶರಣ್ಯತ್ವೇನ ಪಾಣಿನಾ,
ಕೃಪಯಾಽದಿಶತೇ ಶ್ರೀಮದ್ವೇಂಕಟೇಶಾಯ ಮಂಗಳಮ್. ೯

ಚೇತನರನ್ನು ಉದ್ದೇಶಿಸಿ -- 'ನನ್ನ ಪಾದಗಳನ್ನು ರಕ್ಷಕವೆಂದು ಆಶ್ರಯಿಸಿ' ಎಂದು ಕೃಪೆಯಿಂದ ಕೈಯಿಂದ ತೋರಿಸುತ್ತಿರುವ ವೇಂಕಟೇಶ! ನಿನಗೆ ಮಂಗಳವು.

ಶ್ರೀ ವೇಂಕಟೇಶನು ನಿಂತಿರುವ ಭಂಗಿಯಲ್ಲಿ ಆತನ ದಕ್ಷಿಣ ಹಸ್ತವು (ಬಲ್ಲಗೈ) ಪಾದಗಳನ್ನು ಸೂಚಿಸುವಂತಿದೆ. ಅದನ್ನು ನೋಡಿ, ವೇದಾನ್ತಸಾರವೂ, ಗೀತಾ ರಹಸ್ಯವೂ ಆದ ಪ್ರಪತ್ತಿ ಅಥವಾ ಶರಣಾಗತಿಯೇ ಅದರ ಅರ್ಥವೆಂದು ನಿರ್ಧರಿಸಿ, ಆಚಾರ್ಯರು ಅಂತಹ ಪರಮ ಕರುಣಾಶಾಲಿಯಾದ ವೇಂಕಟೇಶನಿಗೆ ಮಂಗಳನ್ನು ಬಯಸುವುದು ನಿಜವಾಗಿಯೂ ಹೃದಯಂಗಮವಾದುದು.

ದಯಾಮೃತತರಂಗಿಣ್ಯಾಸ್ತರಂಗೈರಿವ ಶೀತಲೈಃ,
ಅಪಾಂಗೈಸ್ಸಿಂಚತೇ ವಿಶ್ವಂ ವೇಂಕಟೇಶಾಯ ಮಂಗಳಮ್. ೧೦

ದಯೆಯೆಂಬ ಅಮೃತ ನದಿಯ ಅಲೆಗಳಂತೆ ಶೀತಲವಾದ ಕಡೆಗಣ್ಣಿನ ನೋಟದಿಂದ ಪ್ರಪಂಚವನ್ನು ಸೇಚನೆಗೈಯುತ್ತಿರುವ ವೇಂಕಟೇಶ! ನಿನಗೆ ಮಂಗಳವು.

"ಯಶ್ಚ ರಾಮಂ ನ ಪಶ್ಯೇತ್ತು ಯಂ ಚ ರಾಮೋ ನ ಪಶ್ಯತಿ
ನಿಂದಿತ ಸ್ಸಭವೇಲ್ಲೋಕೇ .... .... ...."

ಶ್ರೀರಾಮನು ಅವತರಿಸಿದ್ದ ಕಾಲದಲ್ಲಿ ಯಾವನು ರಾಮನನ್ನು ನೋಡುವುದಿಲ್ಲವೋ ಅಥವಾ ರಾಮನು ಯಾವನನ್ನು ನೋಡುವುದಿಲ್ಲವೋ ಅವನು ಲೋಕದಲ್ಲಿ ನಿಂದ್ಯನು. ಅಂದರೆ, ರಾಮನು ಅಷ್ಟು ದರ್ಶನೀಯನೂ, ಕರುಣಾಕರನೂ ಆಗಿದ್ದನೆಂದು ತಿಳಿದುಬರುತ್ತದೆ. ಅದರಂತೆ, ಪರಮಾತ್ಮನ ಅವಲೋಕನವು ಅಮೃತದಂತೆ ಅಷ್ಟು ಶೀತಲವಾದದ್ದೂ ಕೋಮಲವಾದದ್ದೂ ಹೌದು. ಅಂತಹ ಚೇತೋಹಾರಿಯೂ ಜಗದುಜ್ಜೀವನಕಾರಿಯೂ ಆದ ಅವಲೋಕನಸುಖವನ್ನು ಅನುಭವಿಸದಿದ್ದರೆ ಮೇಲೆ ನಮ್ಮ ಕಣ್ಣುಗಳಿದ್ದು ಫಲವೇನು?

ಸ್ರಗ್ಭೂಷಾಂಬರಹೇತೀನಾಂ ಸುಷ ಮಾವಹಮೂರ್ತಯೇ,
ಸರ್ವಾರ್ತಿಶಮನಾಯಾಸ್ತು ವೇಂಕಟೇಶಾಯ ಮಂಗಳಮ್. ೧೧

ಧರಿಸಿರುವ ಹಾರಗಳಿಗೂ, ಕುಂಡಲಾದಿ ಅಲಂಕಾರಗಳಿಗೂ, ಶಂಖಚಕ್ರಾದಿ ದಿವ್ಯಾಯುಧಗಳಿಗೂ ಕಾಂತಿಯನ್ನುಂಟು ಮಾಡುವ ಅವಯವಗಳುಳ್ಳವನೂ ಎಲ್ಲರ ದುಃಖಗಳನ್ನೂ ಪರಿಹರಿಸುವವನೂ ಆದ ಶ್ರೀ ವೇಂಕಟೇಶ! ನಿನಗೆ ಮಂಗಳವು.

ಲೋಕದಲ್ಲಿ ಸಾಮಾನ್ಯವಾಗಿ ಜನರು ತಮಗೆ ಒಂದು ಸೌಂದರ್ಯವುಂಟಾಗಲೆಂದು ಅಲಂಕಾರಗಳನ್ನು ಮಾಡಿಕೊಳ್ಳುವರು, ಆದರೆ, ಪರಮಾತ್ಮನು ಧರಿಸುವ ಹೂವಿನ ಮಾಲೆಯೇ ಆಗಲಿ, ರತ್ನ ಖಚಿತವಾದ ಕಿರೀಟ ಕುಂಡಲಾದಿ ಆಭರಣಗಳೇ ಆಗಲಿ, ಹಿಡಿದಿರುವ ದಿವ್ಯಾಯುಧಗಳೇ ಆಗಲಿ ಆತನ ಸೌಂದರ್ಯಕ್ಕಾಗಿ ಅಲ್ಲ; ಅವುಗಳ ಸಾರ್ಥಕತೆಗಾಗಿ; ಪರಮಾತ್ಮನು ಧರಿಸಿರುವುದರಿಂದ ಅವು ಸಫಲವಾಗುವುವು. ಪರಮಾತ್ಮನ ತೇಜೋಮಯವಾದ ದಿವ್ಯಮಂಗಳ ವಿಗ್ರಹದ ಸಂಪರ್ಕದಿಂದ ಅವುಗಳಿಗೆ ಕಾಂತಿಯು ದೊರಕುವುದು. ಅಲ್ಲದೆ ಚಕ್ರ ಖಡ್ಗಾದಿ ಆಯುಧಗಳು ದುಷ್ಟದಮನ ಮಾಡುವುದರಲ್ಲಿ ಸಹಕಾರಿಗಳಾಗಿರುವುದರಿಂದ ಅಲಂಕಾರಕ್ಕಿಂತಲೂ ಆರ್ತತ್ರಾಣಪರಾಯಣನಾದ ಪರಮಾತ್ಮನ ರಕ್ಷಕತ್ವದ್ಯೋತಕವಾಗಿವೆ --ಎಂಬ ಸುಮಧುರವಾದ ಭಾವವು ಸ್ಫುರಿಸುತ್ತದೆ. ಅಂತಹ ವೇಂಕಟೇಶ ನಿನಗೆ ಮಂಗಳವು.

ಶ್ರೀವೈಕುಂಠವಿರಕ್ತಾಯ ಸ್ವಾಮಿಪುಷ್ಕರಿಣೀ ತಟೇ,<br>
ರಮಯಾ ರಮಮಾಣಾಯ ವೇಂಕಟೇಶಾಯ ಮಂಗಳಮ್. ೧೨

ಶ್ರೀ ವೈಕುಂಠ ವಿರಕ್ತನಾಗಿ ಸ್ವಾಮಿ ಪುಷ್ಕರಿಣೀ ತೀರದಲ್ಲಿ ರಮಾ ಸಹಿತವಾಗಿ ವಿಹರಿಸುತ್ತಿರುವ ವೇಂಕಟೇಶ! ನಿನಗೆ ಮಂಗಳವು.



ಪರಮಾತ್ಮನು ವೈಕುಂಠದಲ್ಲಿ ವಿರಕ್ತನಾದುದು ಚೇತನರ ಉಜ್ಜೀವನಕ್ಕಾಗಿಯೇ. ಆದುದರಿಂದ ಭೂ ವೈಕುಂಠವೆಂದು ಪ್ರಸಿದ್ಧವಾದ ತಿರುಮಲೆಯಲ್ಲಿ ಅವತರಿಸಿ, ಸಂತತವಾಗಿ ಭಕ್ತರನ್ನುದ್ಧರಿಸುತ್ತಿರುವ ವೇಂಕಟೇಶನಿಗೆ ಮಂಗಳವು.

ಶ್ರೀಮತ್ಸುಂದರಜಾಮಾತೃಮುನಿಮಾನಸವಾಸಿನೇ,<br>
ಸರ್ವಲೋಕನಿವಾಸಾಯ ಶ್ರೀನಿವಾಸಾಯ ಮಂಗಳಮ್. ೧೩

ಸೌಮ್ಯಜಾಮಾತೃಯೋಗಿಗಳ ಮನೋನಿವಾಸಿಯಾಗಿದ್ದರೂ ಸರ್ವಲೋಕ ನಿವಾಸಿಯಾದ ಶ್ರೀನಿವಾಸ! ನಿನಗೆ ಮಂಗಳವು.

ಪರಮ ಭಕ್ತರಾದ ಗುರುವರ್ಯರ ಮನಸ್ಸಿನಲ್ಲಿ ಇರುವನೆನ್ನುವುದರಿಂದ ಭಕ್ತರೆಲ್ಲರ ಮನಸ್ಸಿನಲ್ಲಿಯೂ ಗೋಚರಿಸುವನೆಂಬ ಭಾವವು ವ್ಯಕ್ತವಾಗುವುದು. ಸರ್ವಾಂತರ್ಯಾಮಿಯಾದ ಪರಮಾತ್ಮನ ಇರುವಿಕೆಯು ಅವರವರ ಭಕ್ತಿ ಶ್ರದ್ಧೆಗಳನ್ನೂ ಅವಲಂಬಿಸಿರುತ್ತದೆಂಬ ವಿಷಯವು ಇದರಿಂದ ಧ್ವನಿತವಾಗುತ್ತದೆ.

ಮಂಗಳಾಶಾಸನಪರೈರ್ಮದಾಚಾರ್ಯಪುರೋಗಮೈಃ,<br>
ಸರ್ವೈಶ್ಚ ಪೂರ್ವೈರಾಚಾರ್ಯೈಃ ಸತ್ಕೃತಾಯಾಸ್ತು ಮಂಗಳಮ್. ೧೪

ಮಂಗಳಶಾಸನಪರರಾದ ನಮ್ಮ ಆಚಾರ್ಯರೇ ಮೊದಲಾದ ಹಿಂದಿನ ಎಲ್ಲ ಆಚಾರ್ಯರಿಂದಲೂ ಸತ್ಕರಿಸಲ್ಪಟ್ಟ ವೇಂಕಟೇಶ! ನಿನಗೆ ಮಂಗಳವು.

ಇಂತು ಶ್ರೀ ವೇಂಕಟೇಶ ಮಂಗಳಾಶಾಸನವು ಮುಗಿದುದು.

* * * * *



# ✻ ಎರಡು ಶ್ರೀವೈಷ್ಣವ ಮಠಗಳು ✻

---ಸಿ. ಗೋವಿಂದಾಚಾರ್.

ಆಧ್ಯಾತ್ಮಿಕ ಮಾರ್ಗದರ್ಶಿ ಸಂಸ್ಥೆಗಳಾದ ಮಠಗಳು ಹುಟ್ಟಿ ಬೆಳೆದು ಅಭಿವೃದ್ಧಿಯಾಗಲು ಆಯಾಯಾ ಕಾಲದ ರಾಜರು ಹಾಗೂ ಅವರ ಗುರುಗಳು ಬಹಳಷ್ಟು ಶ್ರಮಿಸಿದ್ದಾರೆ. ೧೨ ನೇ ಶತಮಾನದಲ್ಲಿ ಕಾಣಿಸಿಕೊಂಡ ಶ್ರೀ ಬ್ರಹ್ಮತಂತ್ರ ಮಠ (ಇಂದಿನ ಪರಕಾಲ ಮಠ) ಹಾಗೂ ಶ್ರೀಮದಹೋಬಿಲ ಮಠಗಳು ಅಸ್ತಿತ್ವಕ್ಕೆ ಬರಲು ವೇದಾಂತ ದೇಶಿಕರು ಮೂಲಕಾರಣರಾಗಿದ್ದಾರೆ. ಇದಕ್ಕೆಮುಂಚೆ ದೇವಸ್ಥಾನಗಳೇ ಮಠಗಳ ಕಾರ್ಯಗಳನ್ನು ನಿರ್ವಹಿಸಿ ಸಮಾಜದ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕೇಂದ್ರಗಳಾಗಿದ್ದವು. ಮುಸಲ್ಮಾನರ ಹಾವಳಿ ಹಾಗೂ ಮತಗಳ ತಿಕ್ಕಾಟದಿಂದ ಶ್ರೀ ವೈಷ್ಣವಾಚಾರ್ಯರಲ್ಲಿ ಪರಸ್ಪರ ಸಂಬಂಧ ತಪ್ಪಿಹೋಗಿ ಸಂಪ್ರದಾಯಗಳಲ್ಲಿ ಬದಲಾವಣೆ ತಲೆದೋರಿತು. ಅನೇಕ ಪೀಠಗಳಿಗೆ ನಿರ್ವಾಹಕರಿಲ್ಲದೇ ಹೋಯಿತು. ಆದರೆ ಶ್ರೀರಂಗ, ತಿರುಪತಿ, ಕಂಚಿ ಮೇಲುಕೋಟೆ ಮುಂತಾದ ದಿವ್ಯಕ್ಷೇತ್ರಗಳಲ್ಲಿ ನಯಿನರಾಚಾರ್ಯ, ಘಟಿಕಾಶತಂ ಅಮ್ಮಾಳ್ (ನಡಾದೂರರ ಪೌತ್ರ) ಬ್ರಹ್ಮತಂತ್ರಸ್ವಾಮಿ, ಕೇಶವಾಚಾರ್ಯ, ವಡಕ್ಕು ತಿರುವೀಧಿಪಿಳ್ಳೈ (ಶ್ರೀಕೃಷ್ಣಪಾದರು) ಮುಂತಾದ ಪ್ರಕಾಂಡ ಪಂಡಿತರು ಕಾಲಕ್ಷೇಪ ಸದಸ್ಸು, ಪ್ರವಚನಾದಿ ಕಾರ್ಯಗಳಲ್ಲಿ ನಿರತರಾಗಿದ್ದು ಸಿದ್ಧಾಂತದ ಪತಾಕೆಯನ್ನು ಎತ್ತಿ ಹಿಡಿದೇ ಇದ್ದರು.

ಕಂಚಿ ಪೀಠವನ್ನು ಹಾಗೂ ದೇವಸ್ಥಾನದ ಉಸ್ತುವಾರಿ ಕೆಲಸವನ್ನು ನೋಡಿಕೊಳ್ಳುತ್ತಿದ್ದವರು ಕೌಂಡಿನ್ಯಗೋತ್ರಜರು ಹಾಗೂ ದೇಶಿಕರ ಜ್ಞಾನ ಪುತ್ರರಾದ ವೀರವಲ್ಲಿ ಪೇರರುಳಾಳಯ್ಯನ್. ಇವರು ಭಗವತ್ ಸಾಕ್ಷಾತ್ಕಾರಕ್ಕಾಗಿ ತಮ್ಮಲ್ಲಿರುವ ಪರಮ ಭಕ್ತಿಯನ್ನೇ ಪ್ರಧಾನ ತಂತ್ರವನ್ನಾಗಿ ಉಪಯೋಗಿಸಿಕೊಂಡಿರುವುದನ್ನು ಕಂಡ ವರದರಾಜ ದಂಪತಿಗಳು 'ನೀವು ಬ್ರಹ್ಮತಂತ್ರ ಸ್ವತಂತ್ರರು' ಎಂಬ ಬಿರುದನ್ನು ಕೊಟ್ಟು ನೀವು ಪೀಠಾಧಿಪತಿಗಳಾಗಿರುವುದೇ ನಮ್ಮ ಅಪೇಕ್ಷೆ ಎಂದು ಹೇಳಿದರು. ೧೩೫೯ ರಲ್ಲಿ ಬ್ರಹ್ಮತಂತ್ರ ಮಠವು ಉದಯವಾಯಿತು. ಈ ಪ್ರಸಂಗವು 'ನಾಮುಮ್ ನಮ್ ಪೆಂಡುಗಳುಂ-ನಮ್‌ವೀಡು' ಎಂದು ವರದರಾಜಸ್ವಾಮಿ ದೇವಸ್ಥಾನದ ಶಾಸನದಲ್ಲಿ ಉಕ್ತವಾಗಿದೆ.

ಅಹೋಬಿಲೇ ಶ್ರೀ ನೃಸಿಂಹ
ಪ್ರೇಷ ಮಂತ್ರಂ ಸ್ವಯಂದದೌ
ಯೋಗಿರೂಪೇಣ ಯಸ್ಮಾಸ್ಮೈ
ಶಠಕೋಪಾಯ ಮಂಗಳಂ

ಅಹೋಬಿಲ ಮಠದ ಸ್ಥಾಪನೆಯೂ ಕೂಡ ಭಗವತ್ಸಂಕಲ್ಪದಂತೆಯೇ ಆಗಿದೆ. ಮೇಲು ಕೋಟೆಯ ಘನ ವಿದ್ವಾಂಸ ಕಡಾಂಬಿ ಕೇಶವಾಚಾರ್ಯರ ಸುಪುತ್ರರಾದ ಶ್ರೀನಿವಾಸಾಚಾರ್ಯರಿಗೆ ಒಂದು ರಾತ್ರಿ ಸ್ವಪ್ನದಲ್ಲಿ ಲಕ್ಷ್ಮೀನೃಸಿಂಹಸ್ವಾಮಿಯು ಪ್ರಸನ್ನನಾಗಿ 'ಮಗೂ ಶ್ರೀನಿವಾಸ, ನಿನ್ನ ಮೂಲಕ ಲೋಕೋಪಕಾರವನ್ನು ಮಾಡಲು ಸಂಕಲ್ಪಿಸಿದ್ದೇನೆ. ಅಹೋಬಿಲಕ್ಕೆ ಬಾ, ನಾನೇ ನಿನಗೆ ಸನ್ಯಾಸದೀಕ್ಷೆ ಕೊಡುವೆನು' ಎಂದು ಹೇಳಿದ ಹಾಗಾಯಿತು. ಆಚಾರ್ಯರಿಗೆ ತಟ್ಟನೆ ಎಚ್ಚರವಾಗಿ ಪ್ರವಾಸ ಕೈಗೊಂಡು ಅಹೋಬಿಲಕ್ಕೆ ಬಂದರು. ಆಚಾರ್ಯರನ್ನು ಸಕಲ ಮರ್ಯಾದೆಗಳೊಂದಿಗೆ ಕರೆತರಬೇಕೆಂದು ಕಳಿಂಗ ರಾಜಾ ಮುಕುಂದ ದೇವರಾಯನಿಗೂ ನೃಸಿಂಹಾಜ್ಞೆಯಾಗಿತ್ತು. ಮಾರನೆಯದಿನ ಆಚಾರ್ಯರು ಭವನಾಶಿನಿ ನದಿ ತೀರದಲ್ಲಿ ಅನುಷ್ಠಾನಮಾಡುತ್ತಿದ್ದಾಗ ಅನಿರೀಕ್ಷಿತವಾಗಿ ಒಬ್ಬ ವೃದ್ಧಯತಿ ಗೋಚರವಾಗಿ 'ನೃಸಿಂಹಯತಿ' ಎಂದು ಪರಿಚಯ ಮಾಡಿಕೊಂಡರು. ಆಚಾರ್ಯರಿಗೆ ಸ್ವಪ್ನಜ್ಞಾಪಕಕ್ಕೆ ಬಂದು ಯತಿಗಳಿಗೆ ಸಾಂಪ್ರದಾಯಿಕವಾಗಿ ನಮಸ್ಕಾರಗಳನ್ನು ಮಾಡಿ ದೀಕ್ಷೆಯನ್ನು ಪ್ರಾರ್ಥಿಸಿದರು. ಯತಿಗಳು ಆಚಾರ್ಯರಿಗೆ ಪಂಚಸಂಸ್ಕಾರಗಳನ್ನು, ಪ್ರೇಷ ಮಂತ್ರವನ್ನು ಉಪದೇಶಿಸಿ 'ಶಟಕೋಪ' ಎಂಬ ದಾಸ್ಯನಾಮವನ್ನಿಟ್ಟು, ಮುದ್ರೆಗಳನ್ನು ಅನುಗ್ರಹಿಸಿ 'ನಿನ್ನಿಂದ ಪಂಚಸಂಸ್ಕಾರಗಳನ್ನು ಹೊಂದಿದವರೆಲ್ಲಾ ಸಾಕ್ಷಾತ್ ನೃಸಿಂಹನಿಂದ ಹೊಂದಿದಂತೆಯೇ. ನೀನು ಮತ್ತು ನಿನ್ನ ಪರಿವಾರ ನೃಸಿಂಹಮೂರ್ತಿಯ ಸಮೇತ ಊರು ಗ್ರಾಮ ಪಟ್ಟಣಗಳನ್ನು ಸಂಚರಿಸಿ ಕಲ್ಯಾಣಕಾರ್ಯಗಳನ್ನು ಮಾಡಿ. 'ಗ್ರಾಮೆಗ್ರಾಮೇಚಗತ್ವಾ ಪದಕಮಲನ್ ತಾನ್ ಮಾಂ ಗೃಹೀತ್ವಾ ಅಭಿರಕ್ಷ' ಎಂದು ಹೇಳಿ ಕಿರಿದಾದ ಲಕ್ಷ್ಮಿನೃಸಿಂಹಮೂರ್ತಿ ಒಂದನ್ನು ಕೊಟ್ಟು ಕಣ್ಮರೆಯಾದರು. ವಿಷಯ ಎಲ್ಲೆಡೆಗಳಲ್ಲಿ ಹರಡಿ ಭಕ್ತರ ಸಂಖ್ಯೆ ನೂರ್ಮಡಿ ಆಯಿತು. ೧೩೯೮ ರಲ್ಲಿ ಅಹೋಬಿಲ ಮಠಸ್ಥಾಪಿತವಾಯಿತು. ಅಂದಿನಿಂದ ನೂತನ ಯತಿಗಳು **ನೃಸಿಂ**ಹನ ಸನ್ನಿಧಿಯಲ್ಲೇ ತುರೀಯಾಶ್ರಮವನ್ನು ಸ್ವೀಕರಿಸುವುದು ಪದ್ಧತಿಯಾಯಿತು. ಸಂಚಾರವೂ ಆರಂಭವಾಗಿ ದೇವರ ಉತ್ಸವವನ್ನು ರಾಜನೇ ಪ್ರಥಮವಾಗಿ ಹೊತ್ತ. ದೇವರೇ ದೀಕ್ಷೆ ಕೊಡುತ್ತಿರುವ ಶಿಲ್ಪಕಲಾಕೃತಿಯನ್ನು ಕೆಳಗಿನ ಅಹೋಬಿಲದ ಪ್ರಹ್ಲಾದವರದ ಸನ್ನಿಧಿಯ ರಂಗಮಂಟಪದಲ್ಲಿ ನೋಡಬಹುದು.

## ಆರಾಧ್ಯದೈವ :

ಮಠ ಎಂದಮೇಲೆ ಒಂದು ಆರಾಧ್ಯದೈವ, ಮಠಾಧಿಪತಿ, ಆರಾಧಕವರ್ಗ, ಪರಿಚಾರಕವರ್ಗ ಆಡಳಿತ ಮಂಡಲ --ಮುಂತಾಗಿ ಒಂದು ದೊಡ್ಡ ಸಂಸ್ಥೆಯನ್ನೇ ನೋಡಬಹುದು. ಪರಕಾಲ ಹಾಗೂ ಅಹೋಬಿಲ ಮಠದ ಸ್ವಾಮಿಗಳನ್ನು ಆರಾಧನ ಜೀಯರ್‌ಗಳೆಂದೂ, ವಾನಮಾಮಲೈ ಹಾಗೂ ಕಂಚಿ ಜೀಯರುಗಳನ್ನು ಅಧ್ಯಾಪಕ ಜೀಯರ್‌ಗಳೆಂದೂ, ಶ್ರೀರಂಗದ ಜೀಯರ್‌ಗಳನ್ನು ಪರಿಚಾರಕ ಜೀಯರ್‌ಗಳೆಂದು ವಿಂಗಡಿಸಲಾಗಿದೆ. ರಾಮಾನುಜ -- ದೇಶಿಕಾದಿಗಳು ಆರಾಧಿಸಿದ ದೈವದತ್ತವಾಗಿ ಬಂದ ಲಕ್ಷ್ಮೀಹಯಗ್ರೀವ ಸ್ವಾಮಿಯೇ ಬ್ರಹ್ಮತಂತ್ರಮಠದ ಆರಾಧ್ಯಮೂರ್ತಿ. ಕಾಲಕ್ರಮೇಣ ನೂತನವಾಗಿ ಬಂದ ಯತಿಗಳು ತಾವು ಪೂರ್ವಾಶ್ರಮದಲ್ಲಿ ಆರಾಧಿಸುತ್ತಿದ್ದ ಮೂರ್ತಿಗಳನ್ನು ಮಠಕ್ಕೆ ಒಪ್ಪಿಸುತ್ತಿದ್ದರು. ಹೀಗೆ ಬಂದ ಮೂರ್ತಿಗಳ ಪೈಕಿ ಪೆರಿಯ ಪರಕಾಲಸ್ವಾಮಿಗಳು ಆರಾಧಿಸುತ್ತಿದ್ದ- ಲಕ್ಷ್ಮೀನಾರಾಯಣಮೂರ್ತಿಯೂ ಒಂದು. ಕ್ರಮೇಣ ಶ್ರೀಮಠದ ಪ್ರಥಮ ಶ್ಲೋಕವು 'ಲಕ್ಷ್ಮೀ ಹಯವದನ ಲಕ್ಷ್ಮೀನಾರಾಯಣೇಭ್ಯೋ ನಮಃ' ಎಂದಾಯಿತು. ಶ್ರೀರಾಮಾನುಜ ಬ್ರಹ್ಮತಂತ್ರಸ್ವಾಮಿ ಒಪ್ಪಿಸಿದ ವೇಣುಗೋಪಾಲ, ಹಾಗೂ ವಾಗೀಶ ಸ್ವಾಮಿಗಳಿಂದ ಬಂದ ಲಕ್ಷ್ಮೀನೃಸಿಂಹಮೂರ್ತಿಗಳು ಸೇರಿ ಒಟ್ಟು ಪ್ರಥಮ ಸ್ಥಾನದಲ್ಲಿ ಶೇಷಪೀಠದ ಮೇಲೆ ೪ ಮೂರ್ತಿಗಳಿವೆ. ಸರಸ್ವತಿ ದತ್ತವಾದ ಲಕ್ಷ್ಮೀ ಹಯಾಸ್ಯಮೂರ್ತಿಯು ನೋಡುವುದಕ್ಕೆ ಬಹಳ ಕಿರಿದಾದ್ದರಿಂದ ಭಕ್ತರಿಗೆ ಚೆನ್ನಾಗಿ ಕಾಣುವ ಉದ್ದೇಶದಿಂದ ಅಭಿನವ ರಂಗನಾಥಸ್ವಾಮಿಗಳು ಅದೇ ರೀತಿಯ ದೊಡ್ಡ ಆಕಾರದ ಬೆಳ್ಳಿಮೂರ್ತಿಯನ್ನು ತಿರುಪತಿಯಿಂದ ಮಾಡಿಸಿ ಪ್ರತಿಷ್ಠೆ ಮಾಡಿದರು

ುತ್ತು ೨೫ ಸಾವಿರ ತೊಲದ ಒಂದು ರೂಪಾ
ುಯ ಬೆಳ್ಳಿನಾಣ್ಯಗಳಿಂದ ತಗಡು ಮಾಡಿಸಿ
ೊಡ್ಡ ರಜತ ಮಂಟಪವನ್ನು ಮತ್ತು ಅದರಲ್ಲಿ
ಮೆಟ್ಟಿಲುಗಳ ಸಿಂಹಾಸನವನ್ನು ಪೂಜಾ ಹಾಗೂ
ಉಪಚಾರ ಸಾಮಗ್ರಿಗಳನ್ನು ಮಠದ ಕಲಶವನ್ನು
ತಿಷ್ಠೆ ಮಾಡಿಸಿದರು. ದಿವ್ಯದೇಶಗಳನ್ನು ಪ್ರತಿ ನಿಧಿ
ುವ ಮೂರ್ತಿಗಳು, ಆಳ್ವಾರಾಚಾರ್ಯರು, ಸ್ವರ್ಣ
ತಾರಿಗಳು, ಪಾತ್ರೆಗಳು ಹಾಗೂ ಸಾಲಗ್ರಾಮಗಳು
ಜತ ಮಂಟಪವನ್ನು ಅಲಂಕರಿಸಿವೆ. ಅಹೋಬಿಲ
ುಠದ ಆರಾಧ್ಯಮೂರ್ತಿ ಮಾಲೋಲ ನೃಸಿಂಹ,
ವರತ್ನಖಚಿತವಾದ ಡೋಲೆಯಲ್ಲಿದೆ. ಸಂಚಾ
ದ ಸಂಕೇತವೋ ಏನೋ ಎಂಬಂತೆ ಮಾಲೋ
ನಿಗೆ ಪಾದುಕೆಯೂ ಇದೆ. ಕಿರಿಯ ಸ್ವರ್ಣ ನೃಸಿಂ
ಮೂರ್ತಿ ರಾಜ ಪ್ರತಾಪರುದ್ರನಿಂದ ಬಂದಿರುತ್ತೆ.
ೀಜಾಕ್ಷರ ಸಹಿತವಾದ ನವನೀತ ಕೃಷ್ಣಮೂರ್ತಿ
ುರಡನೆಯ ಸ್ಥಾನದಲ್ಲಿದೆ. ರಜತ ವರದಮೂರ್ತಿ
ಡಾದೂರ್ ಅಮ್ಮಾಳ್‌ರ ಕೊಡುಗೆ. ಮಿಕ್ಕ ಮೂರ್ತಿ
ಳು ಪರಕಾಲ ಮಠದಲ್ಲಿದ್ದಂತೆಯೇ. ಆದ್ದರಿಂದ
ಕ್ತಕಾಮನಾದ ಭಗವಂತನೇ ಸಾನ್ನಿಧ್ಯವನ್ನು ಬಯ
ದ್ದರಿಂದ ಈ ಮಠಗಳು ಮಹಾನ್ ಮಠಗಳಾ
ುವು.

**ರಾಜಾಶ್ರಯ :**

ದಿಗ್ವಿಜಯ ಹಾಗೂ ಸಮರಗಳಲ್ಲಿ ಮಠಗಳಿಗೆ ರಾಜಾಶ್ರಯ ಅನಿವಾರ್ಯ. ಸಮರಗಳಲ್ಲಿ ಪರಕಾಲ ಮಠ ಅನೇಕಬಾರಿ ಸ್ಥಳಾಂತರಗೊಂಡಿದೆ. ಸಂಚಾರ ಅಹೋಬಿಲ ಮಠಕ್ಕೆ ಪರಂಪರಾಗತವಾಗಿ ಬಂದಿರುತ್ತೆ. ಇದರಿಂದಾಗಿ ಸಮಗ್ರ ಭಾರತದಲ್ಲಿ ಒಟ್ಟು ೮೦ ಶಾಖೆಗಳಿವೆ. ಶ್ರೀನಿವಾಸನ ಸಂಕಲ್ಪವೋ ಏನೋ ಬ್ರಹ್ಮತಂತ್ರ ಸ್ವಾಮಿಗಳು ತಿರುಪತಿಯಲ್ಲಿ ಪರಕಾಲ ಮಠವನ್ನು ಮೈಸೂರು ರಾಜವಂಶದ ಗುರುಮನೆಯಾಗಿಯೂ ಮತ್ತು ಯದುರಾಯರನ್ನು ಶಿಷ್ಯರಾಗಿ ಅಂಗೀಕರಿಸಿ ನಿಕಟಸಂಪರ್ಕವನ್ನುಂಟು ಮಾಡಿ ಮೈಸೂರು ಸಂಸ್ಥಾನದ ಭವ್ಯ ಇತಿಹಾಸವನ್ನೇ ಆರಂಭಿಸಿದರು. ಇದರ ಸಂಕೇತವಾಗಿ ಶ್ರೀನಿವಾಸನ ಸನ್ನಿಧಿಗೆ ಬೆಳ್ಳಿಯ ನಂದಾದೀಪವನ್ನು ಸಮರ್ಪಿಸಲಾಯಿತು. ಕ್ರಮೇಣ ಶ್ರೀಮಠಕ್ಕೆ ಗದ್ವಾಲ್, ಸತಾರ, ರೇವಾ, ವನಪರ್ತಿ, ಸಾಂಗ್ಲಿ, ಕೊಲ್ಲಾಪುರ, ಮಾಗಡಿ, ಸಾಮಂತರ ಸ್ನೇಹವೂ, ಅಹೋಬಿಲ ಮಠಕ್ಕೆ ವಿಜಯನಗರದರಸ -- ಸಾಮಂತ -- ಪಾಳೇಗಾರರ ಸ್ನೇಹ ಬೆಳೆದು ಎರಡೂ ಮಠಗಳಿಗೆ ಸಂಚಾರಕ್ಕೆಂದು ಆನೆ, ಕುದುರೆ, ಪಲ್ಲಕಿ ಛತ್ರಿ, ಚಾಮರ, ಸೈನ್ಯದ ತುಕಡಿ, ಆಳುಗಳು ಬ್ರಾಹ್ಮಣರು ಯಥೇಚ್ಛವಾಗಿ ಧಾನ್ಯ ಸಂಪತ್ತುಗಳು ಪ್ರಾಪ್ತವಾಯಿತು. ಅಹೋಬಿಲ ಮಠಕ್ಕೂ ಗದ್ವಾಲ್ ಸಂಸ್ಥಾನಕ್ಕೂ ನಿಕಟ ಸಂಪರ್ಕವಿದೆ. ಸೋಮಭೂಪಾಲರಾಯ ೨೪ ನೇ ಸ್ವಾಮಿಗಳಿಂದಲೂ, ರಾಜ ರಾಮಭೂಪಾಲರಾಯ ೨೬ ನೇ ಸ್ವಾಮಿಗಳಿಂದಲೂ, ವನಪರ್ತಿಯ ರಾಮೇಶ್ವರ ರಾಜ ೩೨ ನೇ ಸ್ವಾಮಿಗಳಿಂದಲೂ ಪಂಚಸಂಸ್ಕಾರ ಹೊಂದಿ ಶಿಷ್ಯರಾಗಿ ರಾಮಾನುಜ ದಾಸರೆಂದು ಹೆಸರಿನ ಪಕ್ಕ ಸೇರಿಸಿಕೊಂಡರು. ಅಹೋಬಿಲವು ಮುಸ್ಲಿಮರ ಧಾಳಿಗೆ ತುತ್ತಾದಾಗ ೭ ನೇ ಸ್ವಾಮಿಗಳ ಕೋರಿಕೆಯಂತೆ ಮೊದಲನೆಯ ರಂಗರಾಜ ಶತ್ರುವನ್ನು ಹೊಡೆದೋಡಿಸಿ ಅಹೋಬಿಲವನ್ನು ಯಥಾಸ್ಥಿತಿಗೆ ತಂದನು.

ಟಿಪ್ಪುಸುಲ್ತಾನನ ನಿಧನದಿಂದ ೧೮೦೦ ರ ಸುಮಾರಿಗೆ ಮೈಸೂರರಸರ ಆಳ್ವಿಕೆ ಜಾರಿಗೆ ಬಂತು. ಅರಮನೆ -- ಗುರುಮನೆಗಳ ಸ್ನೇಹ ಸಂಬಂಧಗಳು ಹತ್ತಿರವಾದುವು. ಆಚಾರಃ ಪ್ರಥಮೋಧರ್ಮಃ ಎಂಬಂತೆ ಎಲ್ಲ ಶುಭಕಾರ್ಯಗಳಲ್ಲಿ ದೊರೆಗಳು ಶ್ರೀ ಶ್ರೀಗಳವರನ್ನು ಬರಮಾಡಿಕೊಂಡು ಪಾದಪೂಜೆ ಸಲ್ಲಿಸಿ ಫಲ ಮಂತ್ರಾಕ್ಷತೆಯನ್ನು ಸ್ವೀಕರಿಸುವ ಸತ್ಸಂಪ್ರ

ದಾಯ ಬೆಳೆಯಿತು. ಹಾಗೆಯೇ ಮಠದಲ್ಲಿ ನಡೆಯುವ ಜಯಂತ್ಯುತ್ಸವ, ತಿರುನಕ್ಷತ್ರ, ಸದಸ್ಸು, ಬಹುಮಾನ ವಿತರಣೆ ಬಿರುದುಗಳನ್ನು ಕೊಡುವುದು ಮುಂತಾದ ಕಾರ್ಯಕ್ರಮಗಳಲ್ಲಿ ಮಹಾರಾಜರು ರಾಜಾರ್ಹವಾದ ವೈದಿಕ ವಿಶೇಷ ಭೂಷಣಗಳೊಂದಿಗೆ ಮಠಕ್ಕೆ ಬರುತ್ತಿದ್ದರು. ಇಂಥಾ ಸಂಸ್ಕೃತಿ ಚೆನ್ನಾಗಿಯೇ ಬೆಳೆದು ಶ್ರೀಮಠವು ಆಯಸ್ಕಾಂತದಂತೆ ಹೆಚ್ಚು ಹೆಚ್ಚು ಭಕ್ತರನ್ನು ಆಕರ್ಷಿಸಿತು. ನೂತನ ಯತಿಗಳ ನೇಮಕಾತಿ ಅರಸರ ಒಪ್ಪಿಗೆ ಆದಮೇಲೆಯೆ. ಅಹೋಬಿಲ ಮಠದಲ್ಲಿ ಹಿರಿಯ ಭಾಗವತರುಗಳ ಅನಿಸಿಕೆ ಹಾಗೂ ಸ್ವಾಮಿಗಳು ಮಾಡುವ ನಾಮನಿರ್ದೇಶನದ ಮೇರೆಗೆ ಹೊಸ ಸ್ವಾಮಿಗಳ ಆಯ್ಕೆ ಆಗುವುದು. ದಿಗ್ವಿಜಯ ಯಾತ್ರೆಯಲ್ಲೇ ಹೆಚ್ಚು ಕಾಲ ಕಳೆದ ೪ ನೇ ಶ್ರೀನಿವಾಸ ಬ್ರಹ್ಮತಂತ್ರಸ್ವಾಮಿಗಳನ್ನು ವರ್ಷಾನುಗಟ್ಟಲೆ ಕಾಣದೆ ಬೇಸರಗೊಂಡ ಮುಮ್ಮಡಿಯವರು 'ಶ್ರೀ ಶ್ರೀಗಳವರು ತಕ್ಷಣ ಹಿಂದಿರುಗಿ ನಮಗೆ ಸೇವೆ ಕೊಡಬೇಕು' ಎಂದು ಪ್ರಾರ್ಥನಾರೂಪದ ಆದೇಶವನ್ನು ಹೊರಡಿಸಿದರು. ಆಚಾರ್ಯರಿಂದ ಪ್ರಭಾವಿತರಾದ ರಾಜರು ವರಮಾನದ ದೃಷ್ಟಿಯಿಂದ ಕೃಷಿ ಭೂಮಿ, ಗ್ರಾಮ, ತೋಟ, ಚಿನ್ನ--ಬೆಳ್ಳಿ ಪದಾರ್ಥಗಳನ್ನೂ, ಮಠಕೊಳ್ಳುವ ಪದಾರ್ಥಗಳಿಗೆ ತೆರಿಗೆ ವಿನಾಯಿತಿಯನ್ನು ಕೊಟ್ಟರು. ಘಂಟಾವತಾರ ಪರಕಾಲಸ್ವಾಮಿ (೧೮೧೭) ಕಾಲದಲ್ಲಿ ಮುಮ್ಮಡಿಯವರು ಡೋಲೋತ್ಸವಕ್ಕಾಗಿ ರತ್ನಮಯವಾದ ೧) ಡೋಳಿಕ ೨)ಮಡಚುವ ಕನ್ನಡಿ ೩) ಚಾಮರ ೪) ಪೀಠಸಮೇತ ಬಲಮುರಿಶಂಖ ೪) ಕಂಠೀಹಾರ ಪದಕಗಳನ್ನು ಶ್ರೀಮಠಕ್ಕೆ ಒಪ್ಪಿಸಿದರು. ಅಹೋಬಿಲ ಮಠಕ್ಕೆ ಸಮರ್ಪಿಸಿದ ಚಿನ್ನದ ಡೋಲೆಯನ್ನು ಪಲ್ಲಕ್ಕಿ, ಚಿಕ್ಕ ಬೆಳ್ಳಿ ಮಂಟಪ, ತಾಂಬೂಲ ಸಮರ್ಪಿಸಲು ಚಿನ್ನದ ಪೆಟ್ಟಿಗೆಯನ್ನು ಈಗಲೂ ನೋಡಬಹುದು. ಪ್ರತಿ ಚಾತುಮಾಸ್ಯ ಸಮರ್ಪಿಸುತ್ತಿದ್ದರು. ಗದ್ವಾಲರಾಜನಿಂದ ಬಂದ ರಜತಮಂಟಪವನ್ನು ೩೮ ನೇ ಅಳಸಿಂಗರ್ ಸ್ವಾಮಿಗಳು ವಿಸ್ತರಿಸಿ ನವೀಕರಿಸಿದರು.

ತೆಂಗಲೈ--ವಡಕಲೈ ಬಿಕ್ಕಟ್ಟು ಇಂದಿನಂತೆ ಅಂದು ತೀವ್ರವಾಗಿರದಿದ್ದರೂ ಅಲ್ಲಲ್ಲಿ ಕೆಲವು ವೈಚಾರಿಕ ಭಿನ್ನಾಭಿಪ್ರಾಯಗಳಿದ್ದವು. 'ರಾಮಾನುಜ ದಯಾಪಾತ್ರಂ' ಶ್ಲೋಕದ ಪಠಣ ಬ್ರಹ್ಮತಂತ್ರಸ್ವಾಮಿಗಳ ಕಾಲದಿಂದಲೂ ಜಾರಿಯಲ್ಲಿದ್ದರೂ ಆಚರಣೆಯಲ್ಲಿ ಲೋಪವಿತ್ತು. ೧ನೆಯ ವರದ ವೇದಾಂತ ಸ್ವಾಮಿಗಳ ಕಾಲದಲ್ಲಿ ರಾಜ ಒಡೆಯರು ಇದರ ಬಗ್ಗೆ ಆಜ್ಞೆ ಹೊರಡಿಸಿದ್ದರು. ಚಿಕ್ಕದೇವರಾಯ ಒಡೆಯರ ಕಾಲದಲ್ಲಿ ಇದನ್ನು ಕಡ್ಡಾಯವಾಗಿ ಪಠಿಸಲು ಸನ್ನದೊಂದನ್ನು ಹೊರಡಿಸಿ ಚೆಲುವರಾಯಸ್ವಾಮಿಯನ್ನು ಅವರ ಕುಲದೈವವನ್ನಾಗಿ ಮಾಡಿಕೊಂಡು ಮತ್ತು ಮುಂದಿನ ರಾಜ ಮನೆತನ ಶ್ರೀ ವೈಷ್ಣವ ದೀಕ್ಷೆಯನ್ನೆ ಅನುಸರಿಸಬೇಕೆಂದು ಆಜ್ಞೆಯನ್ನು ಹೊರಡಿಸಿದರು. ನಂತರ ಬಂದ ರಾಜರುಗಳು ಹಿಂದಿನ ರಾಜಾಜ್ಞೆಗಳನ್ನು ದೃಢೀಕರಿಸಿದರು. ಪರಿವಾರ ಸಮೇತ ಅಹೋಬಿಲ ಸ್ವಾಮಿಗಳು ಲೋಕೋದ್ಧಾರಕ್ಕಾಗಿ ನಾನಾ ಕಡೆಗಳಲ್ಲಿ ಸಂಚರಿಸುತ್ತಿರುವುದರಿಂದ ಅವರಿಗೆ ಯಾವ ತೊಂದರೆಯೂ ಬರಬಾರದು, ಅವರಿಂದ ಸುಂಕ ವಸೂಲು ಮಾಡಬಾರದು ಮತ್ತು ಗೌರವಾದರಗಳಿಂದ ಕಾಣಬೇಕು ಎಂದು ಬ್ರಿಟಿಷ್ ರೆಸಿಡೆಂಟ್ ಅಧಿಕಾರಿ, ಹೈದರಾಬಾದ್ ನಿಜಾಮ ಹಾಗೂ ಇನ್ನೂ ಅನೇಕ ಪ್ರಾಂತೀಯ ಅಧಿಕಾರಿಗಳಿಂದ ಸ್ಥಾಯಿ ಆದೇಶ ಹೊರಡಿಸಲಾಗಿತ್ತು.

## ಮಹಾಮಹಿಮರು :

'ಅಭಿಗಮನ ಆರಾಧನದಲ್ಲಿ, ಸ್ವಾಮಿಗಳಿಂದಲೇ ತೀರ್ಥಶಠಾರಿ ಕೃಪೆಯಾಗುವುದು ಭಕ್ತರನ್ನು ಹೆಚ್ಚು ಆಕರ್ಷಿಸಿದೆ. ಚಕ್ರಾಂಕನ, ಭರನ್ಯಾಸ, ಕಾಲಕ್ಷೇಪ ಸದಸ್ಸು, ಮಠದ ದಿನಚರಿ. ವಾದದಲ್ಲಿ ಸೋತ ಕಾಶಿಯ ಅದ್ವೈತಿ ಒಬ್ಬರು ಶ್ರೀ ವೈಷ್ಣವ ಸಿದ್ಧಾಂತದ ರೀತಿ ನೀತಿಗಳನ್ನು ಮೆಚ್ಚಿ ಸನ್ಯಾಸ ದೀಕ್ಷೆಯನ್ನು ಪಡೆದರು. ಇವರೇ ದ್ವಿತೀಯ ಬ್ರಹ್ಮತಂತ್ರಸ್ವಾಮಿ ಶ್ರೀ ವಾತ್ಸ್ಯವರದ ವೇದಾಂತ ರಾಮಾನುಜರು.

ಆದಿನಾಥ ಕ್ಷೇತ್ರವನ್ನು (ಆಳ್ವಾರ್ ತಿರುನಗರಿ) ಪ್ರಥಮ ಶಠಕೋಪಸ್ವಾಮಿಗಳು ಸಂದರ್ಶಿಸಿದಾಗ ಆ ಪ್ರಾಂತ್ಯವನ್ನು ಆಳುತ್ತಿದ್ದ ಕುಲಶೇಖರ ಪಾಂಡ್ಯ ಎಂಬ ಶೈವರಾಜನೊಬ್ಬನಮ್ಮಾಳ್ವಾರ್ ವಿಗ್ರಹವನ್ನು ತೆಗೆಯಿಸಿ ಊರ ಹೊರಗಿರುವ ಪಾಳುಭಾವಿಯಲ್ಲಿ ಎಸೆದಿದ್ದನ್ನು ತಮ್ಮ ಜ್ಞಾನ ಚಕ್ಷುವಿನಿಂದ ಕಂಡು ವಿಗ್ರಹವನ್ನು ಪುನಃ ಪ್ರತಿಷ್ಠಾಪಿಸಿದರು. ರಾಜನು ವಿಸ್ಮಯಗೊಂಡ. ಇದಾದ ಒಂದೆರಡು ದಿನಗಳಲ್ಲಿ ಅದೇರಾಜ ಸ್ವಾಮಿಯನ್ನು ಕಂಡು 'ಬಿಡಾರದ ಸುತ್ತ ಸಿಂಹಗಳು ಬಂದವೆಂದು ಭ್ರಮಿಸಿ ಶತ್ರುಗಳು ಪಲಾಯನ ಮಾಡಿದರು ಎಂದು ವರದಿ ಮಾಡಿ 'ಅಪರಾಧವನ್ನು ಮನ್ನಿಸಿ' ಎಂದು ಹೇಳಿ ದಾಸ್ಯವನ್ನು ಪ್ರಾರ್ಥಿಸಿದ. ಇವರುಗಳು ವಾದ ವಿವಾದದಲ್ಲಿ ಸ್ವಾಮಿಯು ಅಹೋಬಿಲದಲ್ಲಿ ಶಿವಪಾರ್ವತಿಯರು ನೃಸಿಂಹನನ್ನೂ ಮತ್ತು ಅವನ ಪಾದಗಳನ್ನು ಪೂಜಿಸುತ್ತಿರುವ ವಿಷಯವನ್ನು ಪ್ರಸ್ತಾಪಿಸಿ ಪರತತ್ವವನ್ನು ಸಮರ್ಥಿಸಿದರು. ಇದಕ್ಕಾಗಿಯೇ ವರಿಗೆ 'ಆದಿವಣ್' ಎಂಬ ಬಿರುದು ಪ್ರಾಪ್ತವಾಯಿತು. ನಂತರ ಬಂದ ಯತಿಗಳು 'ವಣ್‌ಶಠಕೋಪ' ಎಂದು ಹಸ್ತಾಕ್ಷರ ಹಾಕುವುದು, ಎಲ್ಲಾ ಸತ್ಕಾರ್ಯಗಳನ್ನು ಲಕ್ಷ್ಮೀನೃಸಿಂಹನೇ ಸಾಕ್ಷಾತ್ತಾಗಿ ನಡೆಸುವನೆಂಬ ಐತಿಹ್ಯದ ಗುರುತಿಗಾಗಿ ಆ ಪರಂಪರೆಯ ಯತಿಗಳನ್ನು 'ಅಳಹಿಯ ಶಿಂಗರ್' ಎಂದು ಸಂಬೋಧಿಸುವುದು ರೂಢಿ ಆಯಿತು. ಪ್ರಾರಂಭದಲ್ಲೇ ಮಠದ ಖ್ಯಾತಿಗೆ ಹಾಗೂ ಕ್ರಮೇಣ ತಿರುಮಲೈಗೆ ಸೋಪಾನ ನಿರ್ಮಾಣದಲ್ಲಿ ಸಹಕಾರ, ಶ್ರೀರಂಗದ ದಶಾವತಾರ ಸನ್ನಿಧಿ ನಿರ್ಮಾಣ -ಮುಂತಾದ ಸರ್ವಾಂಗೀಣ ಅಭಿವೃದ್ಧಿಯಲ್ಲಿ ಆದಿವಣ್ ಶಠಕೋಪರೇ ಮೂಲಕಾರಣವಾಗಿದ್ದಾರೆ.

ದಿಲ್ಲೀಶೇ ನಾರ್ಚಿತಾಂಘ್ರಿಃ
ಯತಿಕುಲನೃಪತೇಃ ತೃತೀಯೋವತಾರೋ
(ಮೈಸೂರು ಪರಕಾಲಮಠದ ಶಾಸನ)

ಅತ್ಯಂತ ದೀರ್ಘಕಾಲ (೬೧ ಸಂವತ್ಸರಗಳು) ಆಳಿದವರು ಶ್ರೀ ಭಾಷ್ಯಕಾರರ ತೃತೀಯ ಅವತಾರವೆಂದು ಪ್ರಸಿದ್ಧಿಯಾದ ಪೆರಿಯಪರಕಾಲಸ್ವಾಮಿಗಳು. ಕವಿತ್ವದಲ್ಲಿ ಹಾಗೂ ದಿಗ್ವಿಜಯ ಯಾತ್ರೆಯಲ್ಲಿ ತಮ್ಮನ್ನೇ ಹೋಲುವವರೆಂದು ಭಾವಿಸಿ ತಿರುಮಂಗೈ ಆಳ್ವಾರರು ಈ ಸ್ವಾಮಿಗಳ ಕನಸಿನಲ್ಲಿ ಬಂದು 'ನೀನು ನನ್ನಂತೆಯೇ ಶ್ರಮಿಸಿದ್ದೀಯೆ, ನನ್ನ ಹೆಸರನ್ನು ಧರಿಸಬಹುದು' ಎಂದು ಹೇಳಿದಹಾಗಾಯಿತು. ಅಂದಿನಿಂದ ಬ್ರಹ್ಮತಂತ್ರದಮಠದ ಹೆಸರು 'ಪರಕಾಲಮಠ' ಎಂದಾಯಿತು. ಮಹಾಸ್ವಾಮಿಗಳ ತಪೋನಿಷ್ಠೆ ತೇಜಸ್ಸು ದೆಹಲಿಯ ವಿಧರ್ಮಿರಾಜ್, ನಂತಹವನನ್ನೇ ಆಕರ್ಷಿಸಿತು. ಅವನಿಂದ ಮಠಕ್ಕೆ ನೌಬತ್‌ನಗಾರಿ, ಖಿಲ್ಲತ್ತು ಮುಂತಾದ ಮರ್ಯಾದೆಗಳು ಪ್ರಾಪ್ತವಾದುದಲ್ಲದೇ ವಿಷ್ಣುದೇವಸ್ಥಾನಗಳ ಜೀರ್ಣೋದ್ಧಾರಕ್ಕೆ ಸಹಾಯವೂ ದೊರೆಯಿತು.

ಪರಕಾಲಮಠದ ಇತಿಹಾಸದಲ್ಲಿ ಘಂಟಾವತಾರ ಸ್ವಾಮಿಗಳ ಕಾಲ ೧೮೧೧--೩೦ (ಆಕಾರ ತೇಜಸ್ಸುಗಳಲ್ಲಿ ದೇಶಿಕರನ್ನು ಹೋಲುತ್ತಿದ್ದುರಿಂದ ಈ ಹೆಸರು) ಸ್ವರ್ಣಯುಗ. ವಿಷ್ಣುದೇವಸ್ಥಾನಗಳಲ್ಲಿ ದೈನಂದಿನ ಪೂಜಾವಿಧಿ ಶಾತ್ತುಮೊರೈ, ಉತ್ಸವಗಳು, ವಸ್ತ್ರಾಭರಣ ಸಮರ್ಪಣೆ ಆಡಳಿತ ಮುಂತಾದ ವಿಷಯಗಳಲ್ಲಿ ಸುಧಾರಣೆ ತಂದರು. ಕಂಚಿವರದ ಹಾಗು ಪೆರುಂದೇವಿಯರಿಗೆ ಇವರು ಸಮರ್ಪಿಸಿದ ಆಭರಣಗಳನ್ನು ಇಂದಿಗೂ ನೋಡಬಹುದು.

ವಾಮಾಚಾರಗಳನ್ನು ತಡೆಗಟ್ಟಲು ನೃಸಿಂಹಕ್ಷೇತ್ರಗಳಲ್ಲಿ ಜೊತೆಗೆ ಅಹೋಬಿಲಮಠದ ಪಾತ್ರವೂ ಇದೆ. ೬ ನೆಯ ಶ್ರೀವಣ್‌ಶಠಕೋಪರು ಅಸಾಧಾರಣ ಮಂತ್ರಶಕ್ತಿ ಹೊಂದಿದ್ದರೆಂದು, ಅವರ ದರ್ಶನ ಸರ್ವರೋಗ ನಿವಾರಕವೆಂದೂ ಭಕ್ತರ ಸಂಖ್ಯೆ ನೂರ್ಮಡಿ ಆಯಿತು. ವಿಜಯನಗರದ

ಾಮಂತ ಸದಾಶಿವ ರಾಯನ ಮಗಳಿಗೆ ನೃಸಿಂಹ ೀರ್ಥ ಪ್ರಾಶನ ಹಾಗೂ ಪ್ರೋಕ್ಷಣೆ ಮಾಡಿ ಪಿಶಾಚಿ ಿಡಿದಿರುವುದನ್ನು ಹೋಗಲಾಡಿಸಿದರು. ಇದೇ ್ವಾಮಿಗಳು ಜ್ವಾಲಾ ನೃಸಿಂಹ ಕ್ಷೇತ್ರದಲ್ಲಿ ಐಕ್ಯವಾದ ಂಗತಿಯಿಂದ ಮಠದ ಖ್ಯಾತಿ ಇನ್ನಷ್ಟು ಏರಿತು. ೮ ಹಾಗೂ ೩೪ ನೆಯವರು ದೇವರನ್ನು ಸಾಕ್ಷಾ ್ತಾಗಿ ಕಂಡಿರುತ್ತಾರೆ ಮತ್ತು ತೆರೆಮರೆಯಲ್ಲಿ ಸಂಭಾ ಣೆ ಮಾಡುತ್ತಿದ್ದರೆನ್ನಲಾಗಿದೆ. ಒಮ್ಮೆ ಕ್ಷೀರಾನ್ನ ವೇದನದಲ್ಲಿ ಕೂದಲಿದ್ದುದರಿಂದ 'ಸ್ವೀಕರಿಸುವು ಲ್ಲ' ಎಂದು ದೇವರು ಹೇಳಿದ ಹಾಗಾಯಿತು. ರೀಕ್ಷಿಸಿ ನೋಡಿದಾಗ ನಿವೇದನದಲ್ಲಿ ಕೂದಲಿತ್ತು. ಮ್ಮೆ ೨೫ ನೆಯ ಅಳಸಿಂಗರ್‌ಸ್ವಾಮಿಗಳು ದೈವದ ್ರಭಾವವನ್ನು ಎತ್ತಿ ತೋರಿಸಲು ಕುತಂತ್ರಿಗಳು ಾಲಿನಲ್ಲಿ ವಿಷ ಬೆರೆಸಿದುದನ್ನು ತಿಳಿದೂ, ನೃಸಿಂಹ ರುಡರನ್ನು ಸ್ತುತಿಸಿ ಕುಡಿದರು. ಅವರಿಗೆ ಏನೂ ಗಲಿಲ್ಲ. "ಈ ಲೌಕಿಕ ಸಿರಿತನವೆಲ್ಲಾ ನಶ್ವರ, ಭಗ ದ್ಭಕ್ತಿ ಆಚಾರ್ಯ ನಿಷ್ಠೆ ಮಿಗಿಲಾದ್ದು" -- ಇದು ೩೫ ಸ್ವಾಮಿ ಕಳತ್ತೂರ್ ಅಳಸಿಂಗರ್‌ರ ನೀತಿತತ್ವ. ್ರತಿನಿತ್ಯವೂ ಅನುಷ್ಠಾನಕ್ಕೆ ಹೋಗುವ ಮುನ್ನ ಮಠ ದಲ್ಲಿದ್ದ ಹಣವನ್ನೆಲ್ಲಾ ದಾನಮಾಡುತ್ತಿದ್ದರು. ಪುನಃ ಂಜೆಯ ವೇಳೆಗೆ ಅಷ್ಟೇ ಹಣ ಒದಗಿ ಬರುತ್ತಿತ್ತು. ್ರತಿದಿನವೂ ಜಾತ್ರೆಯೋ ಎಂಬಂತೆ ಕಿಕ್ಕಿರಿದ ಜನ ಂದಣಿ ಇರುತ್ತಿತ್ತು. ೩೩ ನೆಯ ಸ್ವಾಮಿ ಪರಂ ೂರ್ ಅಳಸಿಂಗರ್ ಮಾಡಿದ ಮಹಾ ಮಂಗ ಾರತಿಯ ರೀತಿನೀತಿ ಕೃಷ್ಣಗಿರಿಯ ಪಂಜಿನ ಕಳ್ಳ ನ್ನು ಶರಣಾಗತರನ್ನಾಗಿ ಮಾಡಿತು. ಕಳ್ಳರು ತಾವು ೋಚಿದ್ದನ್ನೆಲ್ಲಾ ಮಠಕ್ಕೆ ಸಮರ್ಪಿಸಿ ದಾಸ್ಯವನ್ನು ೇಡಿದರು.

ಪರಕಾಲ ಮಠದ ಖ್ಯಾತಿ ಮದನ ಮೋಹನ ಮಾಲವೀಯ, ರಾಷ್ಟ್ರಾಧ್ಯಕ್ಷರುಗಳಾದ ರಾಜೇಂದ್ರ ಪ್ರಸಾದ್, ರಾಧಾಕೃಷ್ಣನ್, ಮುಖ್ಯಮಂತ್ರಿಗಳಾದ ಕೆ.ಸಿ. ರೆಡ್ಡಿ, ಕೆಂಗಲ್ ಹನುಮಂತಯ್ಯ ಮುಂತಾದ ಗಣ್ಯರನ್ನು ಆಕರ್ಷಿಸಿತು. ತುಮ್ಮನ್, ಮಾರ್ಲ್ ಬರ್ಗ್ ವಿಶ್ವವಿದ್ಯಾನಿಲಯದ ವೇದಾಂತ ವಿಜ್ಞಾನಿ ಗಳಾದ ರುಡೋಲ್ಫ್ ಆಟೋ, ಹೆರ್ ಹೆನ್ರಿಫಿಕ್, ಸ್ವೀಡನ್ನಿನ ಬರ್ಜರ್ ಫಾರೆಲ್, ಪ್ರೆಸ್ಟೂನ ಪ್ರಥಮ ಶ್ರೀಮಂತೆ ಮುಂತಾದ ವಿದೇಶೀಯರು ಮಠಕ್ಕೆ ಭೇಟಿಕೊಟ್ಟು ಆಧ್ಯಾತ್ಮಿಕ ವಿಚಾರಗಳಲ್ಲಿ ಸಂದೇಹ ಗಳನ್ನು ನಿವಾರಿಸಿಕೊಂಡರು.



ಅಭಿನವ ರಂಗನಾಥ ಸ್ವಾಮಿಗಳ ಮಾತೆಂದರೆ ಎದುರುತ್ತರವಿಲ್ಲ. ಮಠದಲ್ಲಿ ದಕ್ಷ ಆಡಳಿತ ಶಿಸ್ತು ಮೇಲಿನಿಂದ ಮೇಲೆ ಭಾಗವತರುಗಳ ಆಗಮನ ಇವರ ಕಾಲದಲ್ಲಿ ಸಾಧ್ಯವಾಯಿತು. ಇಂದಿನ ಪೌಂಡ್ರೀಪುರಂ ಸ್ವಾಮಿಗಳಾದ ಶ್ರೀ ಗೋಪಾಲ ಮಹಾದೇಶಿಕರು ೧೯೫೪ ರಲ್ಲಿ ವಿದ್ವತ್ಸಭೆಯಲ್ಲಿ ಭಾಗವಹಿಸಲು ಮೈಸೂರಿಗೆ ಬಂದಿದ್ದರು. ಸದಸ್ಸು ಮುಗಿದ ಮೇಲೆ "ಮಹಾ ಮಹಾ ವಿದ್ವಾಂಸರು ನಿಮ್ಮ ಆಶ್ರಮ ಪರಂಪರೆಯಲ್ಲಿ ವಿರಾಜಿಸಿರುತ್ತಾರೆ. ಆಶ್ರಮ ಶೂನ್ಯವಾಗಕೂಡದು. ನೀವು ಆಶ್ರಮ ಸ್ವೀಕರಿಸಬಹುದು" ಎಂದು ಸ್ವಾಮಿಗಳು ಹೇಳಿದಾಗ ಗೋಪಾಲಾಚಾರ್ಯರು ಮುಗ್ಧರಾಗಿ ನಕ್ಕುಬಿಟ್ಟರು. ಮುಂದುವರೆಸಿ ಸ್ವಾಮಿಗಳು ನಗುತ್ತಲೇ 'ಈಗ ಲ್ಲದಿದ್ದರೆ ಮುಂದೆ ಆಗಲಿ' ಎಂದರು. "ನನಗೆ ಜೋತಿಷ ಶಾಸ್ತ್ರಗಳಲ್ಲಿ ನಂಬಿಕೆ ಇಲ್ಲ ಆದರೂ ಮಹಾನರ ಬಾಯಿಯಲ್ಲಿ ಬಂದದ್ದು ನಿಜವಾಯಿತು 'ತಿರುವಾಕ್ಕು ಫಲಿತ ವಿಟ್ಟುದು' --ಎಂದು ಗೋಪಾಲದೇಶಿಕನ್ ಸ್ವಾಮಿಗಳು ಮನಸಾರೆ ದೊಡ್ಡಸ್ವಾಮಿಯನ್ನು ಕೊಂಡಾಡಿರುತ್ತಾರೆ. ಅದೆಷ್ಟೇ ದೇಹಾಲಸ್ಯವಿರಲಿ ಆರಾಧನಾನುಷ್ಠಾನಗಳು ನಿಲ್ಲುತ್ತಿರಲಿಲ್ಲ. ಒಮ್ಮೆ ೧೦೨ ಡಿಗ್ರಿ ಜ್ವರ ಹಾಗೂ ಉಗುರು ಸುತ್ತಿನಿಂದ ವಾರ ನರಳುತ್ತಿದ್ದರೂ ಅಭಿಗಮನ ಆರಾಧನ ನಿಲ್ಲಲಿಲ್ಲ. ಇದೇ ಅವರ ಅಂತಿಮಕಾಲಕ್ಕೆ ನಾಂದಿ ಆಯಿತು. ೩೫ನೆಯವರಾದ ಅಭಿನವ ರಾಮಾನುಜರು ಹಾಗೂ ಇಂದಿನ ನೂತನ ಸ್ವಾಮಿಗಳಾದ ಅಭಿನವವಾಗೀಶರು ಪೀಠಕ್ಕೆ ಬರಲು ದೊಡ್ಡಸ್ವಾಮಿಗಳ ಸಂಕಲ್ಪವೇ ಕಾರಣ.

ದೇವಸ್ಥಾನಗಳ ಜೀರ್ಣೋದ್ಧಾರಕ್ಕೆ ಓಗೊಟ್ಟವರು ಕಾರಕುರ್ಚಿ ಪೆರಿಯ ಅಳಶಿಂಗರ್. ರಾಜ ಗೋಪುರ ನಿರ್ಮಾಣ, ದೇವಸ್ಥಾನಗಳನ್ನು ವಶಕ್ಕೆ ತೆಗೆದುಕೊಂಡು ನಿರ್ವಹಿಸುವುದು (ಪುಳ್ಳಬೂದಂ ಗುಡಿ, ಆದನೂರು, ತಿರುವಳ್ಳೂರು) ಮಹಾಪುರುಷ ೪೪ ನೆಯ ಸ್ವಾಮಿಗಳವರೆಗೂ (ಮುಕ್ಕೂರು ವೇದಾಂತ ದೇಶಿಕರು) ಯಶಸ್ವಿಯಾಗಿ ಮುಂದುವರೆಯಿತು. ಶ್ರೀರಂಗರಾಜ ಗೋಪುರದ ನಿರ್ಮಾಣದಲ್ಲಿ ಮಾಜಿ ರಾಷ್ಟ್ರಾಧ್ಯಕ್ಷ ವೆಂಕಟರಾಮನ್‌ರವರು ಮುಕ್ಕೂರು ಅಳಶಿಂಗರಿಗೆ ೭ ಲಕ್ಷ ರೂಪಾಯಿಗಳನ್ನು ಕೊಟ್ಟಿರುತ್ತಾರೆ.

## ಬೃಂದಾವನ :

ಹುಟ್ಟೂರಿನಲ್ಲೇ (ಮೇಲುಕೋಟೆ) ಬೃಂದಾವನಸ್ಥರಾದವರು ಆದಿವಣ್ ಸ್ವಾಮಿಗಳು ಹಾಗೂ ದ್ವಿತೀಯ ಅಹೋಬಿಲ ಸ್ವಾಮಿಗಳು. ಇದರಿಂದಾಗಿ ಪ್ರತಿಸ್ವಾಮಿಗಳು ತಪ್ಪದೆ ಮೇಲುಕೋಟೆಗೆ ಭೇಟಿಕೊಟ್ಟು ತಮ್ಮ ಶ್ರದ್ಧಾಂಜಲಿಯನ್ನು ಅರ್ಪಿಸುವುದು ವಾಡಿಕೆಯಾಯಿತು. ಅಹೋಬಿಲ ಮಠಕ್ಕೆ ಸಂಚಾರವು ಪರಂಪರೆಯಾಗಿ ಬಂದಿರುವುದರಿಂದ ಹಾಗೂ ಶಾಶ್ವತವಾದ ಕೇಂದ್ರಕಟ್ಟಡವಿಲ್ಲದ್ದರಿಂದ ಪರಂಪರೆಯ ಸ್ವಾಮಿಯ ಬೃಂದಾವನಗಳು ಕಂಚಿ, ಶ್ರೀರಂಗ, ಕುಂಭಕೋಣ, ತಂಜಾವೂರು ಮುಂತಾದ ಸ್ಥಳಗಳಲ್ಲಿ ವ್ಯಾಪಿಸಿದೆ. ೪೩ ನೆಯವರಾದ ದೇವನಾರ್ ವಿಳಾಹಂ ಸ್ವಾಮಿಗಳು ನೈಮಿಷಾರಣ್ಯದಲ್ಲಿ ಬೃಂದಾವನಸ್ಥರಾದರು. ೪೪ ನೆಯ ಸ್ವಾಮಿಗಳು ಅಲ್ಲೇ ಸನ್ಯಾಸವನ್ನು ಸ್ವೀಕರಿಸಿದರು ಮತ್ತು ಹಿಂದಿನ ಸ್ವಾಮಿಗಳ ಬೃಂದಾವನವನ್ನು ಭಕ್ತರಿಗಾಗಿ ವಸತಿಯನ್ನೂ ನಿರ್ಮಾಣ ಮಾಡಿದರು. ಮೈಸೂರು ಪರಕಾಲ ಮಠದ ಹಿಂಭಾಗದಲ್ಲಿ ಒಟ್ಟು ೮ ಹಾಗೂ ಶ್ರೀರಂಗ ಪಟ್ಟಣದಲ್ಲಿ ೨ ಬೃಂದಾವನಗಳಿವೆ. ಕೃಷ್ಣಾಪುರದಲ್ಲಿರುವ "ಅಸ್ಮದ್ ಅಸಾಧಾರಣ ಸ್ವಾಮಿ" ಎಂದು ಬಿರುದಾಂಕಿತರಾದ ರಾಮಾನುಜ ಬ್ರಹ್ಮತಂತ್ರಸ್ವಾಮಿಗಳ ಬೃಂದಾವನ ಸರ್ವರೋಗ ನಿವಾರಕ ಹಾಗೂ ಸಂತಾನ ಹೀನರಿಗೆ ಫಲಕಾರಿ ಎಂದೂ ಪ್ರಸಿದ್ಧಿಯಾಗಿದೆ.

ಪರಕಾಲಮಠದ ವಿದ್ಯಾಭಿವೃದ್ಧಿ ಹಾಗೂ ಪುಸಾರಕಾರ್ಯಗಳಲ್ಲಿ ಮೈಸೂರು ಮಹಾರಾಜ ಸಂಸ್ಕೃತ ಪಾಠಶಾಲೆ ಹಿರಿದಾದ ಪಾತ್ರವಹಿಸಿದೆ. ಅಹೋಬಿಲ ಮಠವು ಸ್ಥಾಪಿಸಿದ ವೇದಪಾಠಶಾಲೆ ಮದುರಾಂತಕಂ ನಲ್ಲಿದೆ. ಎರಡೂ ಮಠಗಳಲ್ಲಿ ಘನ ವಿದ್ವಾಂಸರಿಗೇನೂ ಕಡಿಮೆ ಇಲ್ಲ. ದಿವ್ಯ ಪ್ರಬಂಧ, ಶ್ರೀಭಾಷ್ಯ ರಹಸ್ಯತ್ರಯಸಾರ ಮುಂತಾದ ಪೂರ್ವಾಚಾರ್ಯರ ಮೂಲಗ್ರಂಥಗಳಿಗೆ ವ್ಯಾಖ್ಯಾನ ವಿವರಣೆ ಟೀಕೆ ಟಿಪ್ಪಣಿಗಳ ರೂಪದಲ್ಲಿ ಗ್ರಂಥರಾಶಿಯನ್ನೇ ನೋಡಬಹುದು. ಇವುಗಳ ಜೊತೆಗೆ ಹಯಗ್ರೀವ--ನೃಸಿಂಹ ಸುಪ್ರಭಾತ, ಮಂಗಳ ಸ್ತೋತ್ರ, ಅಷ್ಟೋತ್ತರ, ಸಹಸ್ರನಾಮಾವಳಿ, ಮಠ ಚರಿತ್ರೆ ಮುಂತಾದ ಕೃತಿಗಳು ಹೇರಳವಾಗಿದೆ. ಅತ್ಯಂತ ಹೆಚ್ಚಿನ ಕೃತಿಗಳನ್ನು ರಚಿಸಿ ಕೃಷ್ಣ ಬ್ರಹ್ಮತಂತ್ರಸ್ವಾ

ಓದಿರಿ. ಓದಿಸಿರಿ.

# ಸಪ್ತಗಿರಿ

ತಿರುಮಲೆ -- ತಿರುಪತಿ ದೇವಸ್ಥಾನಗಳ ಧಾರ್ಮಿಕ ಮಾಸಪತ್ರಿಕೆ ಸಪ್ತಗಿರಿ.

ತೆಲುಗು ತಮಿಳು ಕನ್ನಡ ಹಿಂದಿ ಆಂಗ್ಲ ಭಾಷೆಗಳಲ್ಲಿ ಬೇರೆ ಬೇರೆಯಾಗಿ ಪ್ರಕಟವಾಗುವ ಪತ್ರಿಕೆ.

ಆಧ್ಯಾತ್ಮಿಕ, ಸಾಂಸ್ಕೃತಿಕ, ಧಾರ್ಮಿಕ ವಿಷಯಗಳೊಂದಿಗೆ ವಿಶೇಷಗಳೊಂದಿಗೆ ಪ್ರಕಟವಾಗುವ ಪತ್ರಿಕೆ.

ಸಪ್ತಗಿರಿ ಚಂದಾದಾರರಾಗ ಬಯಸುವವರು ಈ ಕೆಳಗಿನ ಸೂಚನೆಗಳನ್ನು ಗಮನಿಸದೇಕೆಂದು ಪ್ರಾರ್ಥನೆ.

* ಸಪ್ತಗಿರಿಯ ವಾರ್ಷಿಕ ಚಂದಾ ಹನ್ನೆರಡು ರೂಪಾಯಿಗಳು ಮಾತ್ರ. ಎಷ್ಟು ವರ್ಷದ ಚಂದಾ ಹಣವನ್ನಾದರೂ ತುಂಬಬಹುದು. (ಆಜೀವ ಸದಸ್ಯತ್ವವಿಲ್ಲ)
* ತಮ್ಮ ಚಂದಾ ಹಣವನ್ನು ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಎಂ.ಓ/ಡಿ.ಡಿ./ಪಿ.ಓ. ರೂಪದಲ್ಲಿ ಕಳುಹಿಸಿ (ಚೆಕ್‌ಗಳನ್ನು ಅಂಗೀಕರಿಸಲಾಗದು).
* ತಮಗೆ ಯಾವ ಭಾಷೆಯ ಸಪ್ತಗಿರಿ ಬೇಕೆಂಬುದನ್ನು ಸ್ಪಷ್ಟವಾಗಿ ಬರೆಯಿರಿ.
* ತಮ್ಮ ಪೂರ್ಣ ವಿಳಾಸವನ್ನು ಬಿಡಿಬಿಡಿಯಾದ ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆಯಿರಿ.
* ಚಂದಾ ಹಣ ತಲುಪಿದ ಮಾರನೆಯ ತಿಂಗಳಿನಿಂದ ಸಪ್ತಗಿರಿಯನ್ನು ಕಳುಹಿಸಲಾಗುವುದು.
* ಚಂದಾ ಹಣವನ್ನು ಕಳುಹಿಸಿದ 30 ದಿನಗಳಲ್ಲಿ ಸಪ್ತಗಿರಿ ತಮಗೆ ಬಾರದಿದ್ದಲ್ಲಿ ತಮ್ಮ ಎಂ.ಓ./ಡಿ.ಡಿ. ಕ್ರಮಸಂಖ್ಯೆ ದಿನಾಂಕ ಮೊದಲಾದ ವಿವರಗಳೊಂದಿಗೆ ಪೂರ್ಣವಿಳಾಸವನ್ನು ನೀಡಿ ಕಾಗದ ಬರೆಯಿರಿ.

ಈ ಮೊದಲೇ ಚಂದಾದಾರರಾದವರಿಗೆ ಸೂಚನೆಗಳು :

* ತಮ್ಮ ಚಂದಾ ಮೊಬಲಗು ಮುಗಿಯುವ ಒಂದು ತಿಂಗಳ ಮೊದಲೇ ಪುನಃ ಚಂದಾ ಹಣವನ್ನು ಕಳುಹಿಸಿ ತಮ್ಮ ಸದಸತ್ಯ ಸಂಖ್ಯೆಯನ್ನು ಪುನರುದ್ಧರಿಸಿಕೊಳ್ಳಿರಿ.
* ತಮ್ಮ ವಿಳಾಸ ಬದಲಾದಾಗ, ಚಂದಾ ಹಣ ಪುನಃ ಕಳುಹಿಸುವಾಗ ಸಪ್ತಗಿರಿಗೆ ಇತರ ಕಾರಣಗಳಿಗಾಗಿ ಬರೆಯುವಾಗ ದಯವಿಟ್ಟು ತಮ್ಮ ಸದಸ್ಯತ್ವ ಸಂಖ್ಯೆಯನ್ನು ತಪ್ಪದೇ ತಮ್ಮ ವಿಳಾಸದೊಡನೆ ನಮೂದಿಸಿ ಬರೆಯಿರಿ.

ಸಂಪಾದಕರು :

**ಸಪ್ತಗಿರಿ**

ತಿ.ತಿ.ದೇ., ತಿರುಪತಿ.

**ಕೊಂಡು ಓದಿರಿ. ಕೊಂಡು ಓದಿಸಿರಿ.**

ಮಿಗಳು 'ಕವಿಸಾರ್ವಭೌಮ' ಎಂದು ಬಿರುದಾಂಕಿತರಾಗಿದ್ದಾರೆ. ದ್ವಿತೀಯ ಅಹೋಬಿಲ ಸ್ವಾಮಿಗಳು ಒಟ್ಟು ೬೦ ಕೃತಿಗಳನ್ನು ಸೃಷ್ಟಿಸಿ 'ಷಷ್ಠಿ ಪ್ರಬಂಧ ನಿರ್ಮಾತ' ಎಂದು ಪ್ರಸಿದ್ಧಿಯಾದರು. ೬ನೆ ಪರಾಂಕುಶ ಶಠಗೋಪರಿಗೆ 'ಕವಿತಾರ್ಕಿಕ ಕಂಠೀರವ' ಎಂಬ ಬಿರುದಿದೆ. ನೃಸಿಂಹ- -ಚೆಂಚುಲಕ್ಷ್ಮಿ ಕಲ್ಯಾಣದ ಬಗ್ಗೆ ೭ನೆ ಸ್ವಾಮಿಗಳು ನಾಟಕ ರೂಪದಲ್ಲಿ 'ವಾಸಂತಿಕಾ ಪರಿಣಯ' ಎಂಬ ಕೃತಿಯನ್ನು ರಚಿಸಿರುತ್ತಾರೆ. ಆಂಧ್ರಕವಿತಾ ಪಿತಾಮಹ ಅಲಸಾನಿ ಪೆದ್ದನ ಆದಿವಣ್ ಸ್ವಾಮಿಗಳಿಂದ ಪಂಚಸಂಸ್ಕಾರ ಹೊಂದಿ ಶಿಷ್ಯನಾದ ಅನ್ನಮಾಚಾರ್ಯರು ಆದಿವಣ್ ಸ್ವಾಮಿಯನ್ನು ಸ್ತುತಿಸಿದ್ದಾರೆ. ಶ್ರೀಮದಭಿನವ ರಂಗನಾಥ ಸ್ವಾಮಿಗಳು ಶ್ರೀ ವೈಷ್ಣವ ಸಿದ್ಧಾಂತ ಹಾಗೂ ಇತರ ದರ್ಶನಗಳ ಜ್ಞಾನ ಭಂಡಾರವೇ ಆಗಿದ್ದರು. ತರುಣ ವಿದ್ವಾಂಸರನ್ನು ಜಾಗೃತಗೊಳಿಸಿ ಉತ್ತೇಜನಕಾರಿಯಾಗಿದ್ದರು. ಸುತ್ತಲೂ ಗ್ರಂಥಗಳನ್ನಿಟ್ಟುಕೊಂಡು ಅಧ್ಯಯನ ಮಾಡುವುದು ಇವರ ವಿದ್ಯಾಭ್ಯಾಸದ ರೀತಿಯಾಗಿತ್ತು. ಹಯಗ್ರೀವಾವತಾರದ ವಿವರಣೆ ಉಳ್ಳ ಇವರ 'ಹಯಶಿರೋಪಾಖ್ಯಾನ' ಸರ್ವಸ್ವೀಕೃತವಾಗಿದೆ. 'ನೃಸಿಂಹ ಪ್ರಿಯಾ' ಪತ್ರಿಕೆ ಹೊರಡಿಸಿದ್ದು, ವಿಶಿಷ್ಟಾದ್ವೈತ ಕೋಶ, ಮತಬೋಧಕ ಪಾಠಶಾಲೆ ಸ್ಥಾಪನೆ--ಇನ್ನೂ ಮುಂತಾದ ವಿದ್ಯಾಭಿವೃದ್ಧಿ ಕಾರ್ಯಗಳಲ್ಲಿ 'ತರ್ಕಸಿಂಹ','ಬುಧಾಗ್ರೇಸರ' ಇಂಜಿಮೇಡು ಅಳಶಿಂಗರ್ ಮಹತ್ತರವಾದ ಪಾತ್ರವಹಿಸಿದ್ದಾರೆ. ತಿರುವನಂತಪುರದ ಭಾಟ್ಟಿಕ ಮೀಮಾಂಸಕರನ್ನು ಹಾಗೂ ಉತ್ತರಾದಿ ಮಠದ ಸತ್ಯಾನಂದ ತೀರ್ಥರನ್ನು ವಾದದಲ್ಲಿ ಜಯಿಸಿದ್ದಾರೆ.

ಕಳೆದ ೨೦ ವರ್ಷಗಳಿಂದ ಅಂದರೆ ರಾಜಧನ--ಹಕ್ಕುಬಾಧ್ಯತೆಗಳ ರದ್ದತಿ ಎರಡೂ ಮಠಗಳಿಗೆ ಯಾವ ಪರಿಣಾಮವನ್ನೂ ಬೀರಿಲ್ಲ. ಅರಮನೆಗುರುಮನೆ ಸಂಬಂಧವು ಅನೌಪಚಾರಿಕವಾಗಿ ಮುಂದುವರಿಯುತ್ತಿದೆ. ಆದರೆ ಆಂತರಿಕವಾಗಿ ಎರಡೂ ಮಠಗಳು ಅನೇಕ ಒಳಸಮಸ್ಯೆಗಳನ್ನು ಎದುರಿಸುತ್ತಿದೆ. ವೇದಾಂತ ದೇಶಿಕರ ಉಪದೇಶದ ಮುಖ್ಯಾಂಶಗಳಾದ ಜ್ಞಾನ ವೈರಾಗ್ಯ ಕೈಂಕರ್ಯಗಳನ್ನು ಹಾಗೂ ವಿಶಿಷ್ಟಾದ್ವೈತ ಸಿದ್ಧಾಂತದ ಸ್ವರೂಪವನ್ನೂ ಪ್ರಸಾರ ಮಾಡುವುದನ್ನೇ ಹೆಗ್ಗುರಿಯಾಗಿಟ್ಟುಕೊಂಡು ಈ ಎರಡು ಮಹಾನ್ ಮಠಗಳು ಸನಾತನ ಸಂಸ್ಥೆಗಳಾಗಿ ಮುಂದುವರಿಯುತ್ತಿದೆ. ಇದರಿಂದಾಗಿ ಯಾವುದೇ ಸಮಸ್ಯೆಗಳು ಅಷ್ಟಾಗಿ ಗಮನಕ್ಕೆ ಬಾರದೆ ಆನುಷಂಗಿಕವಾಗಿವೆ.

--------

# ಧೀರಸಮೀರೇ...

ಭಗವಂತನ ದಶಾವತಾರಗಳಲ್ಲಿ ರಾಮಾವತಾರ -- ಕೃಷ್ಣಾವತಾರಗಳು ಅತ್ಯಧಿಕ ಜನಪ್ರಿಯವಾಗಿವೆ. ರಘುನಾಥ ಯದುನಾಥ ರಿಬ್ಬರೂ ಭಾರತೀಯ ಸಂಸ್ಕೃತಿಯ ಅವಿಭಾಜ್ಯ ಅಂಗ. ಸೇತು ಶೀತಾಚಲ ಪರ್ಯಂತ ಈ ಪುಣ್ಯಮೂರ್ತಿಗಳ ಆರಾಧನೆ ಬಳಕೆಯಲ್ಲಿದೆ. ಇವರಿಬ್ಬರ ವಿಷಯವಾಗಿ ರಚಿತವಾದ ವಿಪುಲ ಸುರಮ್ಯ ಸಾಹಿತ್ಯ ಭಾರತೀಯರ ಅಮೂಲ್ಯ ಆಸ್ತಿ. ಋಷಿ ಕವಿಗಳಿಬ್ಬರು ತಮ್ಮ ಅನುಪಮ ಕಾವ್ಯಗ್ರಂಥಗಳಲ್ಲಿ ಈ ಮಂಗಳ ಮೂರ್ತಿಗಳ ಚೇತೋಹಾರಿ ಚರಿತ್ರೆಯನ್ನು ಚಿತ್ರೋಪಮ ಭಾಷೆಯಲ್ಲಿ ಬರೆದಿಟ್ಟಿದ್ದಾರೆ. ಈ ಗ್ರಂಥಗಳಲ್ಲಿ ರಸವಿದೆ, ಅಲಂಕಾರವಿದೆ -- ಮಹಿಮೆ ಇದೆ - ಆನಂದವಿದೆ -- ದೈವತ್ವವಿದೆ -- ಧರ್ಮವಿದೆ -- ಬಾಳಿಗೊಂದು ನಂಬಿಕೆ ಇದೆ -- ಜೀವನ ಸೂತ್ರಗಳ ನಿರೂಪಣೆ ಇದೆ. ಎಂದೂ ಮಾಸದ ಸೌಂದರ್ಯವಿದೆ -- ನಿತ್ಯಸತ್ಯವಿದೆ -- ಭವ್ಯತೆ ಇದೆ -- ಲಾಲಿತ್ಯವಿದೆ. ಉಪಜೀವ್ಯ ಕಾವ್ಯಗಳ ಈ ಕವಿ ಪುಂಗವರು ಭಾರತದೇಶದ ಎರಡು ಕೀರ್ತಿ ಸ್ತಂಭಗಳು; ಪ್ರಾತಃ ಸ್ಮರಣೀಯ ಪರಮಪಾವನ ಪುರುಷರು.

ರಾಮ ಸರಯೂತೀರವಿಹಾರಿ. ಕೃಷ್ಣ ಯಮುನಾತೀರವಿಹಾರಿ. ರಾಮ ತ್ಯಾಗಮೂರ್ತಿ. ಕೃಷ್ಣ ಪ್ರೇಮಮೂರ್ತಿ. ರಾಮ ವಿರಾಗಮೂರ್ತಿ. ಕೃಷ್ಣ ಅನುರಾಗಮೂರ್ತಿ. ರಾಮ ಅಧ್ಯಾತ್ಮಸೌಂದರ್ಯ ಪ್ರತಿಮೆ. ಕೃಷ್ಣ ಲಾಲಿತ್ಯ ಶೃಂಗಾರ ಪ್ರತಿಮೆ. ರಾಮನೆಂದರೆ ಭಕ್ತಿ ಗೌರವ. ಕೃಷ್ಣನೆಂದರೆ ಸಲಿಗೆ ಸಾಮೀಪ್ಯ. ರಾಮ ನಡೆದದ್ದು ಆದರ್ಶ -- ಕೃಷ್ಣನುಡಿದದ್ದು ಆದರ್ಶ. ರಾಮ ಧರ್ಮಮೂರ್ತಿ. ಕೃಷ್ಣ ಗಾನಮೂರ್ತಿ. ರಾಮ ಬೆಳೆದದ್ದು ಮಹೋನ್ನತ ವ್ಯಕ್ತಿಗಳ ಸಂಸರ್ಗದಲ್ಲಿ -- ಕೃಷ್ಣ ಬೆಳೆದದ್ದು ಸಾಮಾನ್ಯ ಜನಗಳ ಸಂಸರ್ಗದಲ್ಲಿ. ಇಬ್ಬರೂ ಪುರುಷೋತ್ತಮರು. ಕೃಷ್ಣನ ಬಾಲಲೀಲೆಗಳು ಜನಪ್ರಿಯವಾದಷ್ಟು, ರಾಮನ ಬಾಲಲೀಲೆಗಳು ಜನಪ್ರಿಯವಾಗಿಲ್ಲ. ಆದಿಕಾವ್ಯದಲ್ಲಿ ರಾಮನ ಬಾಲಲೀಲಾವರ್ಣನೆಗೆ ಅವಕಾಶವೂ ಇಲ್ಲ. ಮಹತ್ವವೂ ಇಲ್ಲ. ಭಾಗವತದಲ್ಲಿ ಕೃಷ್ಣನ ಬಾಲಲೀಲಾ ವಿನೋದವೇ ಒಂದು ಪ್ರಮುಖಭಾಗ -- ಆಕರ್ಷಕ ಭಾಗ. ರಾಮ ಮಾಡಿದ ಕಾರ್ಯಗಳು ಅತ್ಯದ್ಭುತ. ಕೃಷ್ಣ ಮಾಡಿಸಿದ ಕಾರ್ಯಗಳು ಅತ್ಯದ್ಭುತ. ರಾಮನ ಮುಖದಲ್ಲಿ ಗಾಂಭೀರ್ಯ -- ಕೃಷ್ಣನ ಮುಖದಲ್ಲಿ ಚೆಲ್ಲಾಟ. ಆತನ ಸಾಮೀಪ್ಯ ಕೆಲವರಿಗೆ ಮಾತ್ರ ಲಭ್ಯವಾಗಿದೆ. ಈತನಾದರೋ ಸರ್ವಜನ ಸುಲಭನಾಗಿದ್ದಾನೆ.



ಯಾಮುನಾತೀರ ಪ್ರದೇಶ, ಯಾದವೇಂದ್ರನ ಲೀಲಾಭೂಮಿ, ಅಲ್ಲಿನ ಕಣ ಕಣ ಭೂಮಿ ಆತನ ಕೋಮಲ ಕಾಂತ ಪಾದಪದ್ಮಗಳ ಸ್ಪರ್ಶದಿಂದ ಪುನೀತವಾಗಿದೆ -- ಪುಲಕಿತವಾಗಿದೆ. ಆ ಪ್ರಾಂತದ ತರುಲತೆಗಳೂ ಸಹ ಗೋಪಕಿಶೋರನ ವೇಣುಗಾನಕ್ಕೆ ತಲೆದೂಗಿವೆ. ಕರ್ಣಾಲಂಬಿತ ಮೋಹಕ ಮುಂಗುರುಳು, ರತ್ನ ಗ್ರೈವೇಯ ಹಾರಾವಳಿ, ಸ್ವರ್ಣಾಭಾಸಿತ ವೇತ್ರದಂಡ, ಸಿರಿಮುಡಿಯ ಮೇಲೆ ನಗುತ್ತಿರುವ ನವಿಲುಗರಿ, ಕೈಯಲ್ಲಿ ಬುತ್ತಿಯಗಂಟು -- ಧೇನುಪಾಲಕನಾಗಿ ಹೊರಟ ಮುಗ್ಧ ಮುಕುಂದನ ಮುಗುಳ್ನಗೆಯ ಲಹರಿಗಳನ್ನು ಕಲ್ಪಿಸಿಕೊಂಡರೂ ಸಾಕು -- ಪುಲಕಿತರಾಗುತ್ತಾರೆ ಜನ.

ಗೋಪದರೇಣು ಸಂಕಲಿತ ಕುಂತಲ ಬದ್ಧ ಮಯೂರ ಪಿಂಛ -- ಉದ್ದೀಪಿತ ಮಂದಹಾಸ ಶುಭದೃಷ್ಟಿಲಸನ್ಮುಖ, ನವ್ಯಪುಷ್ಪ ಮಾಲಾ ಪರಿಪೂರ್ಣ, ಗೋಪಜನಲಾಲಿತ ವೇಣುರವಾಭಿರಾಮನಾದ ಕೃಷ್ಣನನ್ನು ನೋಡುವುದೇ ನಯನೋತ್ಸವ. ಕೃಷ್ಣನ ನಾಟ್ಯ -- ಮಾತು -- ನೋಟ -- ನಿಲುವ ಆ ಭಂಗಿ, ಮುದ್ದು ಸೂಸುವ ಮುಗ್ಧವದನಾರವಿಂದ....... ಎಲ್ಲವೂ ಮಧುರ; ಮನೋಜ್ಞ. ನಂದಗೋಕುಲದಲ್ಲಿ ಗೋವುಗಳಾಗಿ, ಗೋವತ್ಸಗಳಾಗಿ, ಗೋಪಬಾಲಕರಾಗಿ ..... ಎಲ್ಲವೂ ತಾನಾಗಿ ವಿಹರಿಸಿದ ಯಾದವೇಂದ್ರನ ಕಥೆಯ ಹಿಂದಿನ ಅಧ್ಯಾತ್ಮ ತತ್ವ ಮನನೀಯ -- ಚಿಂತನೀಯ.

ನಾಮ ಸಮೇತಂ ಕೃತ ಸಂಕೇತಂ
ವಾದಯತೇ ಮೃದುವೇಣುಮ್

ಕೃಷ್ಣ ತನ್ನ ಕೊಳಲ ಇನಿ ದನಿಯಲ್ಲೇ, ಹೆಸರು ಹಿಡಿದು ಕರೆಯುತ್ತಿದ್ದಾನೆ -- ಯಾರನ್ನು? ರಾಧೆ ತನ್ನನ್ನು ಕರೆಯುತ್ತಿದ್ದಾನೆಂದುಕೊಳ್ಳಬಹುದು. ಮಿತ್ರವಿಂದೆ ತನ್ನನ್ನೇ ಕರೆಯುತ್ತಿದ್ದಾನೆಂದುಕೊಳ್ಳಲಡ್ಡಿ ಇಲ್ಲ. ಯಾವ ಗೋಪಕನ್ಯೆಯಾದರೂ ಹಾಗೇ ಭಾವಿಸಿಕೊಳ್ಳಲವಕಾಶವುಂಟು. ವಸ್ತುತಃ ಆ ವೇಣುನಾದದ ಗುಟ್ಟಾದರೂ ಏನು? ಅಖಿಲ ವಿಶ್ವಕ್ಕೆ ರಕ್ಷಣೆಯ ಭರವಸೆ; ಮನುಕುಲಕ್ಕೊಂದು ಶಾಂತಿ ಧರ್ಮ ಸಂದೇಶ; ಅದು ಜೀವಕ್ಕೆ ನೆಮ್ಮದಿ ಕೊಡುವ ಗಾನಲಹರಿ; ಸಂಗೀತದ ಮೂಲಕ ಭಗವದ್ದರ್ಶನದ ರಸಮಯ ಕಲ್ಪನೆ.

ವದಸಿಯದಿ ಕಿಂಚಿದಪಿ
ದಂತ ರುಚಿಕೌಮುದೀ
ಹರತಿ ದರ ತಿಮಿರ ಮತಿ ಘೋರಮ್

ನುಡಿಯೆ ನೀ ಕಿಂಚಿತ್ತು
ದಂತಧಾವಳ್ಯವದು
ಹರಿಸೀತು ನನ್ನೆದೆಯ ಘೋರತಿಮಿರವನು

ಕವಿಯ ಈ ಮಾತಿನ ಗಾಂಭೀರ್ಯದ ಕಡೆ ಗಮನ ಹರಿಸಿದಾಗ, ಸಕಲ ಜೀವಿಗಳ ಅಭೀಪ್ಸೆ ಈ ವಾಕ್ಯಗಳಲ್ಲಿ ಧ್ವನಿಸಿದೆಯೆಂಬುದು ಅರಿವಾಗುತ್ತದೆ. ಸ್ವಾಮಿ ಒಂದೇ ಒಂದು ಮಾತು ನಮ್ಮೊಡನೆ ಆಡಿದರೂ ಸಾಕು ಆ ದಂತಧವಳಿಮೆ ನಮ್ಮೆದೆಯ ಅಂಧಕಾರವನ್ನು ದೂರ ಮಾಡಲಿಕ್ಕೆ ಸಾಕು. ಅಂತಹ ಅಜ್ಞಾನಾಂಧಕಾರ ನಿವಾರಕ ಶಕ್ತಿ ಒಂದೇ ಒಂದು ಮಾತಿನಲ್ಲಡಗಿದೆ.

ತ್ವಮಸಿ ಮಮ ಭೂಷಣಂ
ತ್ವಮಸಿ ಮಮ ಜೀವನಂ
ತ್ವಮಸಿ ಮಮ ಭವ ಜಲಧಿ ರತ್ನಮ್

ನೀನೆನ್ನ ಭೂಷಣವು
ನೀ ನೆನ್ನ ಜೀವನವು
ನೀನೆನ್ನ ಭವಜಲಧಿ ರತ್ನ

# ತಿರುಮಲೆ ತಿರುಪತಿ ದೇವಸ್ಥಾನಗಳು,

## ತಿರುಪತಿ

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

**ಡಿ. ವಿ. ಎಲ್. ಎನ್. ಮೂರ್ತಿ** ಐ.ಎ.ಎಸ್.

ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದಕಾಲ ದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡಿವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ ೧೯೮೫ ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. ೧೦೦೦೦/- ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ. ತಿ. ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿ:
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿ:

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು.

-ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ ತಮ್ಮ ವಿಶ್ವಾಸಿ,

**(ಡಿ. ವಿ. ಎಲ್. ಎನ್. ಮೂರ್ತಿ)**

ಭಗವಂತನೇ ಸರ್ವಸ್ವ -- ತದಿತರ ವಸ್ತುಗಳು ತುಚ್ಛ-- ಎಂಬ ಭಾವ ಈ ಮಾತುಗಳಲ್ಲಿ ಅಡಗಿದೆ.

ಹರಿಮವಲೋಕಯ ಸಫಲಯ ನಯನೇ

ಕಂಡು ಅವನ ಸಫಲಗೊಳಿಸು ನಯನ

ಕಣ್ಣು ಸಾರ್ಥಕವಾಗುವುದು ಹರಿದರ್ಶನವಾದಾಗ ಮಾತ್ರ. ಇದನ್ನೇ ಪುರಂದರ ದಾಸರು -- ಕಂಗಳಿದ್ದೇತಕೋ -- ಕಾವೇರಿರಂಗನ ನೋಡದ -- ಎಂದಿದ್ದಾರೆ.

ಪೂರ್ಣಚಂದ್ರಿಕ -- ಗೌತಮಿ -- ಗಂಗೆ -- ಭಗೀರಥ ರಾಜತನಯೆ -- ಸುಧಾಜಲರಾಶಿ -- ಮೇಘಬಾಲಿಕೆ -- ಚಿಂತಾಮಣಿ -- ಸುರಭಿ ಮನೋಹಾರಿಣಿ -- ಸರ್ವಮಂಗಳೆ -- ಭಾರತೀದೇವಿ -- ಧರಿತ್ರಿ ಶ್ರೀ ಮಹಾಲಕ್ಷ್ಮಿ-- ಮಂದಮಾರುತಿ -- ಮಂದಾಕಿನಿ -- ಶುಭಾಂಗಿ -- ಇವೆಲ್ಲ ನಂದಗೋಕುಲದ ಹಸುಗಳ ಹೆಸರುಗಳು. ಈ ಹೆಸರುಗಳನ್ನು ಕೃಷ್ಣ ಅದೆಷ್ಟು ಸಲ ಕೂಗಿ ಕರೆದಿದ್ದಾನೆ --ಯಮುನಾತೀರದ ಧೀರ ಸಮೀರ, ಈ ಧ್ವನಿಯನ್ನದೆಷ್ಟು ಸಲ ದಶದಿಕ್ಕುಗಳಿಗೆ ಹರಡಿದ್ದಾನೆ!! ಕಾಳಿಂಗನ ಫಣೆಯ ಮೇಲಾಡಿದ ಬಾಲಗೋಪಾಲನ ರಾಸಲಾಸ್ಯವನ್ನು ಕಂಡು ಯಮುನೆ ಧನ್ಯಳಾಗಿದ್ದಾಳೆಂದರೆ ಅತಿಶಯವೇನಿರಲಾರದು!!

ಕೃಷ್ಣನ ಕುಂಚಿತ ಕುಂತಲ ಫಾಲಸೌಂದರ್ಯ, ಸುಧಾಮಂಡಿತ ಪಲ್ಲವಾಧರದ ಮೇಲೆ ಕಂಗೊಳಿಸುವ ಕೊಳಲು, ಮಂಜುಲ ಹಾಸವಿಲೋಕನ -- ಇದಕ್ಕೆ ಹಿನ್ನೆಲೆಯಾಗಿ ಹರಡಿದ ಸಾಂದ್ರ ಶರಚ್ಚಂದ್ರಿಕೆ --ಕರಗಿದ ಬೆಳ್ಳಿಯಂತೆ ಹರಿಯುವ ಯಮುನಾನದಿ ಇಲ್ಲಿ ಬನ್ನಿ -- ಇಲ್ಲಿದೆ -- ಜೀವನ ಸಾರ್ಥಕತೆ -- ಎಂದು ಹತ್ತುದಿಕ್ಕಿಗೆ ತಿಳಿಯ ಪಡಿಸುತ್ತಿರುವ ಧೀರ ಸಮೀರ -- ಕೃಷ್ಣನ ಸುತ್ತಲೂ -- ನೀಲ ಮಣಿ ವಿಗ್ರಹನ ಪ್ರಭಾವಳಿಯಂತೆ--ನಿಂತಿರುವ ನಂದಗೋಕುಲದ ಜೀವಕೋಟಿ -- ವಿಶ್ವವಿಮೋಹನನ, ಈ ವಿಶ್ವ ಮೋಹಕ ಮುರಳೀನಾದ ವಿನೋದದಲ್ಲಿ ಅದೆಂತಹ ಸಂದೇಶ!!

ಧೀರ ಸಮೀರೇ -- ಯಮುನಾತೀರೇ -- ಎಂಬ ಜಯದೇವ ಕವಿಯ ಮಾತು ನೆನಪಾದರೆ ಸಾಕು -- ಅದರಸುತ್ತ ಒಂದು ರಮ್ಯೋಜ್ವಲ ಇತಿಹಾಸವೇ ನಿರ್ಮಾಣವಾಗುತ್ತದೆ. ಆ ಇತಿಹಾಸ -- ಗತ ಇತಿಹಾಸವಲ್ಲ. ಭಕ್ತರ ದೃಷ್ಟಿಯಲ್ಲಿ ನಿತ್ಯನೂತನ --ಸದಾ ಸರ್ವದಾ ನಡೆವ ಘಟನೆ. ಇಂತಹ ಪುಣ್ಯ ರಮ್ಯ ಘಟನೆಗಳ ಚಿಂತನೆ ಒಂದು ರಸತಪಸ್ಸೆ.

---ಬ. ನ. ಗುಂಡೂರಾವ್.

# ಶಿಕ್ಷಣ-ಕಾಳಿದಾಸ

---ಡಾ. ರಾಮಚಂದ್ರ ಅರಳೀಕಟ್ಟಿ

ಕವಿಕುಲಗುರು ಕಾಳಿದಾಸನು ರಾಷ್ಟ್ರದ ಕವಿ, ವರ ಕವಿ. ಅವನು ತನ್ನ ಕೃತಿಗಳಲ್ಲಿ ಅತಿಮುಖ್ಯವಾದ ಸಂಸ್ಕೃತಿಯ ವಿವಿಧ ರೂಪಗಳನ್ನು ಬಣ್ಣಿಸಿರುತ್ತಾನೆ. ಅವುಗಳಲ್ಲಿ ಶಿಕ್ಷಣವೂ ಕೂಡ ಒಂದು ಅಂಶವಾಗಿ ರುತ್ತದೆ. ಪ್ರಚಲಿತ ಶಿಕ್ಷಣ ಪದ್ಧತಿಯ ಆದರ್ಶಗುಣದ ಬಗ್ಗೆ ಆತನೇ ಮುಖ್ಯ ಉದಾಹರಣೆಯಾಗಲು ಅರ್ಹನಾಗುತ್ತಾನೆ. ಸಾಹಿತ್ಯದಲ್ಲಿ, ದರ್ಶನದಲ್ಲಿ, ಸನಾತನ ವಿದ್ಯೆಗಳಲ್ಲಿ ಅವನ ಪಾಂಡಿತ್ಯ ಹಾಗೂ ಮಾನವ ಹಾಗೂ ಪ್ರಕೃತಿಯನ್ನು ಕುರಿತಾದ ಸೂಕ್ಷ್ಮ ನಿರೀಕ್ಷಣಶಕ್ತಿಯು ಅವನ ಕಾವ್ಯಗಳಲ್ಲಿ, ನಾಟಕಗಳಲ್ಲಿ ಪ್ರತಿಬಿಂಬಿಸಲ್ಪಟ್ಟಿವೆ. ಹಾಗೆಯೇ ಶಿಕ್ಷಣವಿಷಯಕವಾದ ಕೆಲವು ವಿಚಾರಗಳು ಅಲ್ಲಲ್ಲಿ ಹರವಿ ಹಮ್ಮಿಕ್ಕೊಂಡಿವೆ. ಒಂದು ವೇಳೆ ಆತನದೇ ಆದ ಶಿಕ್ಷಣ ಸಿದ್ಧಾಂತವು ಅಪೇಕ್ಷಿಸಲ್ಪಟ್ಟರೆ, ಅದನ್ನು ಆಧುನಿಕ ಶಿಕ್ಷಣ ಪರಿಭಾಷೆಯಲ್ಲಿ ಹೇಳುವುದಾದರೆ -- "ಆದರ್ಶವಾದ" ಎಂದು ಹೇಳಬಹುದು. ಹಾಗಿದ್ದರೂ ಸಹ ಆತನ ಈ ಆದರ್ಶವಾದವು ಪ್ರಯೋಜನವಾದಕ್ಕೆ ಸಮಾನವಾದದ್ದು, ಎಂದು ಹೇಳುವುದೇ ಉಚಿತವಾಗುವುದು. ಹಲವು ಕಡೆಗಳಲ್ಲಿ ಆತನ ಮಾತುಗಳು ಈ ಮೇಲೆ ಹೇಳಿದ ವಿಚಾರಗಳನ್ನು ದೃಢೀಕರಿಸುತ್ತವೆ -- "ಮಾಲ ವಿಕಾಗ್ನಿಮಿತ್ರ" ನಾಟಕದಲ್ಲಿ ಗಣದಾಸ ಹಾಗೂ ಹರದಾಸರಲ್ಲಿ ಉತ್ತಮ ನಾಟ್ಯವಿಷಯಕ್ಕೆ ಸಂಬಂಧಿಸಿದ ಕಲಹವು ಪ್ರಾರಂಭವಾಯಿತು. ಅವರವರ ಶಿಷ್ಯರ ನರ್ತನದ ಮೂಲಕವೇ ನಿರ್ಣಯವನ್ನು ಮಂಡಿಸಬೇಕು ಎಂದು ತೀರ್ಮಾನವಾದ ಬಳಿಕ, ಅಗ್ನಿಮಿತ್ರನೇ ಒದ್ಮೊಂಟಿಗನಾಗಿ ನಿರ್ಣಾಯಕಸ್ಥಾನವನ್ನು ಅಲಂಕರಿಸಲು ಕೇಳಿಕೊಳ್ಳಲು--

"ಸರ್ವಜ್ಞಸ್ಯಾಪಿ ಏಕಾಕಿನೋ
ನಿರ್ಣಯಾಭ್ಯುಪಗಮೋ ದೋಷಾಯ"

--ಸರ್ವಜ್ಞನಾದರೂ ಒಬ್ಬನೇ ನ್ಯಾಯವನ್ನು ನಿರ್ಣಯಿಸುವುದು ದೋಷವೇ ಆಗುತ್ತದೆ. ಎಂದು ನುಡಿಯುತ್ತಾನೆ. ಇದನ್ನು ಗಮನಿಸಿದಾಗ ಈಗೀಗ ಶಿಕ್ಷಣ ಕ್ಷೇತ್ರದಲ್ಲಿಯ ಪರೀಕ್ಷಾವಿಧಾನ ಮತ್ತು ಮೌಲ್ಯ ಮಾಪನಗಳನ್ನು ಮಾಡುವಾಗ (ವಿಶೇಷವಾಗಿ ಎಂ.ಎ., ಪಿ.ಎಚ್. ಡಿ.ಗಳಲ್ಲಿ) ಒಬ್ಬರಿಗಿಂತ ಇಬ್ಬರೂ, ಮೂವರೂ ಮೌಲ್ಯಮಾಪನ ಮಾಡುವುದು, ವಿವಿಧ ರೀತಿಯ ಪರೀಕ್ಷೆಗಳನ್ನು ನಡೆಸುವುದೂ ಸಾಮಾನ್ಯವಾಗಿದೆ. ಅಲ್ಲದೇ ವಿಶೇಷ ಪರೀಕ್ಷಾ ಸಮಿತಿಗಳನ್ನು ನಿಯಮಿಸಿರುತ್ತಾರೆ. ಈ ತೆರನಾದ ಶೈಕ್ಷಣಿಕ ಮೌಲ್ಯಾಂಕನದ ಸಿದ್ಧಾಂತವನ್ನು ಕಾಳಿದಾಸನು ತನ್ನ ಗ್ರಂಥಗಳಲ್ಲಿ ಸಮರ್ಥಿಸಿರುತ್ತಾನೆ. ಹಾಗೇ ಮುಂದುವರಿದು (ಬೇರೆ) ಶಿಕ್ಷಣಕ್ಕೆ ಸಂಬಂಧಿಸಿದಂತೆ ಬಾಲಕಿಶೋರರ ಶಿಕ್ಷಾ ವಿಷಯದಲ್ಲಿ ರಘುವಂಶ, ಕುಮಾರಸಂಭವ, ಶಾಕುಂತಲ, ಮಾಲವಿಕಾಗ್ನಿ ಮಿತ್ರ ನಾಟಕಗಳಲ್ಲಿ ರಘು, ಕುಮಾರ ಇಲ್ಲವೇ ಭರತನ ಶಿಕ್ಷಣ ಸಂದರ್ಭಗಳಲ್ಲಿ ಮನೋವಿಜ್ಞಾನ ದೃಷ್ಟಿಯಿಂದಲೂ ಹಾಗೂ ಶಿಕ್ಷಣ ದೃಷ್ಟಿಯಿಂದಲೂ, ಅತ್ಯಮೂಲ್ಯವಾದ ಮಾತುಗಳನ್ನು ಹೇಳಿರುತ್ತಾನಷ್ಟೆ. ಅವುಗಳಲ್ಲಿ ರಘುವಂಶದ ಈ ಶ್ಲೋಕಗಳನ್ನು ಅವಗಾಹನೆಗೆ ತಂದುಕೊಳ್ಳಿ--

ಉವಾಚ ಧಾತ್ರ್ಯಾ ಪ್ರಥಮೋದಿತಂ ವಚೋ
ಯಯೌ ತದೀಯಾಮವಲಂಬ್ಯ ಚಾಂಗುಲಿಮ್
ಅಭೂಚ್ಚ ನಮ್ರಃ ಪ್ರಣಿಪಾತ ಶಿಕ್ಷಯಾ
ಪಿತುರ್ಮುದಂ ತೇನ ತತಾನ ಸೋಽರ್ಭಕಃ
(ರಘು. 3--25)

ಪರಿಸೇವಿಕೆಯ ಅಂಗುಲಿಯನ್ನು ಆಲಂಬನೆಯಾಗಿ ಹೊಂದಿ ನಡೆದಾಡಿದನು. ಅವಳು ನುಡಿದ ನುಡಿಯನ್ನು ಹಾಗೇ ಉಚ್ಚರಿಸಿದನು. ನಮ್ರವಾಗಿ ನಮಸ್ಕರಿಸು ಎಂಬ ಶಿಕ್ಷಣವು ಯಥೋಚಿತವಾಗಿ ಆಯಿತು. ಅದರಿಂದ ಆ ಕುಮಾರನು ತಂದೆ--ತಾಯಿಯರ ಹರ್ಷವನ್ನು ಹೆಚ್ಚಿಸಿದನು. ಇಲ್ಲಿ ಕವಿಯು ರಾಜಕುಮಾರನಾದ ರಘುವಿನ ವಿದ್ಯಾಲಯ ಶಿಕ್ಷಣಕ್ಕಿಂತ ಪೂರ್ವದ ಭಾಷಾಶಿಕ್ಷಣವು ಹೇಗೆ ನೆರವೇರಿತು ಎಂಬುದಾಗಿ ವರ್ಣಿಸುತ್ತಾನೆ. ವಾಸ್ತವವಾಗಿ ಆ ವೇಳೆಯಲ್ಲಿ ರಾಜಕುಮಾರರಿಗೆ ಈ ತೆರನಾದ ಶಿಕ್ಷಣವು ದಾಸಿಯಿಂದ ಇಲ್ಲವೇ ಮಲತಾಯಿಯಿಂದ ಕೊಡಲ್ಪಡುತ್ತಿತ್ತು. ಇಲ್ಲಿ ಶಿಕ್ಷಣೀಯಾಂಶವು ನಡೆದಾಡುವ ಶಿಕ್ಷಣವು, ಸಾಮಾಜಿಕ ಶಿಕ್ಷಣವು, ಮಹತ್ವಪೂರ್ಣವಾಗಿದೆ. ಈ ಕಾಲದಲ್ಲಿ ಭಾಷಾಶಿಕ್ಷಣ ಸಂದರ್ಭದಲ್ಲಿ ಶಿಕ್ಷಣವೇತ್ತ ರಿಂದ "ಆವೃತ್ತಿ -- ಪುನರಾವೃತ್ತಿ" ಸಿದ್ಧಾಂತವು ನೆಚ್ಚಿಕೊಳ್ಳಲ್ಪಟ್ಟಿದೆ. ಈಗಿನ ವಿಕಾಸ ಮನೋವಿಜ್ಞಾನಾನುಸಾರವಾಗಿ ಶಿಶುವಿನ ಮಾತನಾಡುವಿಕೆ, ನಡೆಯುವಿಕೆ, ಒಮ್ಮೆಲೆ ಅಭ್ಯಸಿಸಲ್ಪಡುತ್ತದೆ. ಎನ್ನುವ ನೈಜವು ಕಾಳಿದಾಸನಿಂದಲೂ ಸಮರ್ಥಿಸಲ್ಪಡುವುದು ಆಶ್ಚರ್ಯವನ್ನುಂಟುಮಾಡುವಂಥಹದ್ದಾಗಿದೆ. ಇದೇ ಪ್ರಕಾರವಾಗಿ ಕುಮಾರಸಂಭವ ಕಾವ್ಯದಲ್ಲಿ ಕುಮಾರಕಾರ್ತಿಕೇಯನ ಶಿಕ್ಷಣ ಸಂದರ್ಭದಲ್ಲಿ ಕಾಳಿದಾಸನು ತನ್ನ ಬಾಲಮನೋವಿಜ್ಞಾನದ ಜ್ಞಾನವನ್ನು, ಶಿಕ್ಷಣ ಕ್ರಮದ ಪರಿಚಯವನ್ನು ಪ್ರಕಟಗೊಳಿಸುತ್ತಾನೆ.

ಕ್ವಚಿತ್ಸ್ಖಲದ್ಭಿಃ ಕ್ವಚಿದಸ್ಖಲದ್ಭಿಃ
ಕ್ವಚಿತ್ಪ್ರಕಂಪೈಃ ಕ್ವಚಿದಪ್ರಕಂಪೈಃ
ಬಾಲಃ ಸ ಲೀಲಾಚಲನಪ್ರಯೋಗೈಃ
ತ್ರಯೋರ್ಮುದಂ ವರ್ಧಯತಿ ಸ್ಮ ಪಿತ್ರೋಃ

ಒಮ್ಮೆ ಮುಗ್ಗರಿಸುತ್ತಾ, ಒಮ್ಮೆ ಮುಗ್ಗರಿಸದೇ, ಮತ್ತೊಮ್ಮೆ ತೂರಾಡುತ್ತಾ, ಇನ್ನೊಮ್ಮೆ ತೂಗಾಡದೇ, ಲೀಲಾಗಮನ ಕ್ರಮವಿನ್ಯಾಸದಿಂದ ಆ ಬಾಲಕನು ತಂದೆ--ತಾಯಿಯರ ಹರ್ಷವನ್ನು ವರ್ಧಿಸುತ್ತಿದ್ದನು.

ಏಕೋ ನವ ದ್ವೌ ದಶಪಂಚಸಪ್ತೇ
ತ್ವದೀಗಣನ್ನಾತ್ಮ ಮುಖಂ ಪ್ರಸಾರ್ಯ
ಮಹೇಶ ಕಂಠೋರಗದಂತ ಪಙ್ಕ್ತಿಂ
ತದಂಕಗಃ ಶೈಶವ ಮೌಗ್ಧ್ಯಮೈಶಿಃ

ಒಂದು, ಒಂಬತ್ತು, ಎರಡು, ಹತ್ತು ಎಂಬುದಾಗಿ ಈಶನ ತೊಡೆಯನ್ನಲಂಕರಿಸಿದ ಆ ಈಶಕುಮಾರನು (ಕಾರ್ತಿಕೇಯನು) ಹರನ ಕಂಠಾಭರಣವಾದ ಉರಗದ ದಂತಪಂಕ್ತಿಯನ್ನು ಎಣಿಸುವುದರಿಂದ ಬಾಲಭಾವವನ್ನು ಪ್ರಕಟಿಸಿದನು.

ಈ ಸಂದರ್ಭದಲ್ಲಿ "ಪ್ರಯತ್ನ--ದೋಷಪ್ರಣಾಲಿ" ಎಂದು ಈ ಕಾಲದ ಶಿಕ್ಷಣ ತಜ್ಞರು ಹೇಳುತ್ತಾರೆ. ಇದು ಕಾಳಿದಾಸನಿಗೂ ಪರಿಚಯವಿತ್ತು ಎಂದು ತಿಳಿಯುತ್ತದೆ. ತನ್ನ ತಂದೆಯಾದ ಮಹೇಶನ ಕುತ್ತಿಗೆಯಲ್ಲಿರುವ ಸರ್ಪದ ಹಲ್ಲುಗಳನ್ನು ಎಣಿಸಲಿಕ್ಕೆ ಪ್ರಯತ್ನಿಸಿ ತಪ್ಪಿ ಪುನಃ ಪ್ರಯತ್ನಿಸುತ್ತಾನೆ. ಈ ರೀತಿಯಾಗಿ ಕುಮಾರನ ಬಾಲ್ಯದ ಆಟದ ಸಮಾಚಾರವು ಪಾರ್ವತಿ -- ಪರಮೇಶ್ವರರ ಮನೋವಿನೋದವನ್ನು, ವಾತ್ಸಲ್ಯವನ್ನು ಹೆಚ್ಚಿಸಿತು. ಆಟದ ಮುಖಾಂತರ ಕ್ರೀಡಾಸಂಬಂಧಿಯಾದ ಕಾರ್ಯಕಲಾಪಗಳಿಂದಲೇ ಬಾಲಕರ ಶಿಕ್ಷಣವು ಶ್ರೇಷ್ಠ ಮಟ್ಟದ್ದಾಗಿರುತ್ತದೆ. ಬಾಲಕರು ತಮ್ಮದೇ (ಆಟಗಳಲ್ಲಿ) ಬಯಕೆಗಳಲ್ಲಿ ಅನಿವಾರ್ಯ ಆಗ್ರಹವನ್ನು ತೋರುತ್ತಾರೆ. ಅವರು ಕೇವಲ ಒಡಂಬಡಿಕೆಯ ಮಾತಿಗೆ ಬಗ್ಗದೇ ಇರುವಾಗ ಆ ಪದಾರ್ಥವನ್ನು ಅವರಿಗೆ ಕೊಡಲೇಬೇಕಾಗುತ್ತದೆ. ಉದಾಹರಣೆಗಾಗಿ ಶಾಕುಂತಲ ನಾಟಕದಲ್ಲಿ--

ಎಲೈ ಗೆಳತಿ! ಮಾತಿನಿಂದ ಇವನು ಒಡಂಬಡಲಾರ, ಹೋಗು, ನನ್ನ ಗುಡಿಸಲಿನಲ್ಲಿ ಋಷಿ

ಕುಮಾರ ಮಾರ್ಕಾಂಡೇಯನ ಬಣ್ಣ ಬಣ್ಣಗಳಿಂದ ಕೂಡಿದ ಮಣ್ಣಿನ ನವಿಲಿದೆ. ಅದನ್ನು ಈತನಿಗಾಗಿ ತೆಗೆದು ತಾ.

ಇಲ್ಲಿ ಎರಡನೆಯ ತಾಪಸಿಯು ಮೊದಲನೆಯ ವಳನ್ನು ಕುರಿತು ಈ ರೀತಿ ಹೇಳುತ್ತಾಳೆ.

ದೇರೆ ಕಡೆಯಲ್ಲಿ ಆಲಿಸುವುದನ್ನಲ್ಲದೇ ಬರವಣಿಗೆಯ ಮತ್ತು ಲಿಪಿಯ ಮಹತ್ವವನ್ನು ಬಣ್ಣಿಸುತ್ತಾನೆ.

ಲಿಪೇರ್ಯಥಾವದ್ಗ್ರಹಣೇನ ವಾಙ್ಮಯಂ
ನದೀಮುಖೇನೈವ ಸಮುದ್ರಮಾವಿಶತ್

ನೀರು ನದಿಯ ಮುಖಾಂತರ ಸಮುದ್ರವನ್ನು ಕಾಣುವಂತೆ, ಲಿಪಿಯಜ್ಞಾನದಿಂದ (ಸಂಗೀತ ಸಾಹಿತ್ಯಾದಿ) ವಾಙ್ಮಯದ ಜ್ಞಾನವುಂಟಾಯಿತು.

ಸಾಹಿತ್ಯವೆಂಬ ಸಾಗರದ ಪ್ರವೇಶಕ್ಕಾಗಿ, ರಸಾಸ್ವಾದನೆಗೋಸ್ಕರ ಲಿಪಿಜ್ಞಾನವು ಸಾಧನ ಎಂದು ತಿಳಿದು ಲೇಖನದ ಸ್ಥಾನವು ಮಹತ್ವದ್ದಾಗಿರುತ್ತದೆ.

ಶಿಕ್ಷಾಸಿದ್ಧಾಂತದಲ್ಲಿ ಶಿಕ್ಷಾಪ್ರಕ್ರಿಯೆಯಲ್ಲಿ ಆವೃತ್ತಿ ಹಾಗೂ ಅನುಕರಣದ ಸ್ಥಾನವು ವಿಶಿಷ್ಟವಾದದ್ದು. ಈ ನೈಜವನ್ನು ಕಾಳಿದಾಸನು ಒಪ್ಪಿ ಉದಾಹರಿಸುತ್ತಾನೆ--

ಯದ್ಯತ್ಪ್ರಯೋಗವಿಷಯೇ
ಭಾವಿಕಮುಪದಿಶ್ಯತೇ ಮಯಾ ತಸ್ಯೈ
ತತ್ತದ್ವಿಶೇಷಕರಣಾತ್
ಪ್ರತ್ಯುಪದಿಶತೀವ ಮೇ ಬಾಲಾ

ನಾಟ್ಯವಿಷಯದ ಪರಮ ರಹಸ್ಯಗಳು ಯಾವುವು ನನ್ನಿಂದ ಅವಳಿಗೋಸುಗ ಹೇಳಲಾಗುವುದೋ ಆ ನರ್ತನಭಂಗಿಗಳನ್ನೆಲ್ಲಾ ನನ್ನಂತೆಯೇ ಅನುಕರಿಸಿ, ಮರಳಿ ನನಗೇ ಉಪದೇಶಿಸುವಳೋ ಎಂಬಂತೆ ಇರುವಳು ಈ ಬಾಲೆ.

ಇಲ್ಲಿ ಮಾಲವಿಕೆಯ ಆವೃತ್ತಿಯಿಂದ ಗುರುವಿನ ಯಥಾರ್ಥವಾದ ಅನುಕರಣೆಯಿಂದ, ಯಾವ ರೀತಿಯಲ್ಲಿ ನೃತ್ಯವನ್ನು ಚೆನ್ನಾಗಿ ತನ್ನದಾಗಿಸಿಕೊಂಡಳು ಎಂಬುದು ಸ್ಪಷ್ಟವಾಗುತ್ತದೆ. ಪ್ರಶಂಸಾರೂಪವಾದ ಪುರಸ್ಕಾರವು ಉಪದೇಶಗ್ರಹಣದಲ್ಲಿ ಹೇಗೆ ಉಪಕಾರವಾಗುತ್ತದೆ ಎಂದು ಮಾಳವಿಕೆಯಿಂದ ಪ್ರದರ್ಶಿಸಲ್ಪಡುವ ನೃತ್ಯವನ್ನು ಪುನಃ ಗಣದಾಸನು ಹೊಗಳುತ್ತಾನೆ. ಯಾಕೆಂದರೆ ನೃತ್ಯಕಲೆಯು ವಿಕಸಿತ ಕಲೆಯಾಗಿರುತ್ತದೆ. ಈ ನೃತ್ಯಕಲೆಯಲ್ಲಿ ಸ್ತ್ರೀಯರ ಅಂಗಸೌಷ್ಟವವು, ಶರೀರ ಸೌಂದರ್ಯವು ವಿಶಿಷ್ಟ ಕಲಾಕೌಶಲವು ಅಪೇಕ್ಷಿತವಾಗಿರುತ್ತದೆ.

ಛಂದೋ ನರ್ತಯಿತುಂ ಯಥೈವ
ಮನಸಿ ಶ್ಲಿಷ್ಟಂ ತಥಾಸ್ಯಾವಪುಃ

(ಮಾಲ)

ಬ್ರಹ್ಮನು ಮನಸ್ಸಿನಲ್ಲಿ ನರ್ತನಕ್ಕೋಸುಗ ಹೇಗೆ ಕಲ್ಪಿಸಿದನೋ, ಹಾಗೆಯೇ ಈಕೆಯನ್ನೂ ಸೃಷ್ಟಿಸಿದ್ದಾನೆ.

ಪ್ರಾಯಃ ಕಾಳಿದಾಸನ ಮತದಲ್ಲಿ ಶಿಕ್ಷಣದಲ್ಲಿ ಲಲಿತಕಲೆಯು ಅತ್ಯವಶ್ಯವಾಗಿ ಸೇರಿಕೊಳ್ಳುತ್ತದೆ. ಆತನ ಎಲ್ಲಾ ನಾಯಿಕೆ, ನಾಯಕರು ಚಿತ್ರಕಲೆಯಲ್ಲಿ ಸಂಗೀತಗಳಲ್ಲಿ ನಿಪುಣರಾದದ್ದು ತೋರಿಬರುತ್ತದೆ.

ಶಿಕ್ಷಣೋದ್ದೇಶ್ಯದ ವಿಷಯದಲ್ಲಿ ಕಾಳಿದಾಸನ ವಿಚಾರ ಏನು? ಎಂಬುದನ್ನು ವಿಚಾರಿಸಲು ಈ ಶ್ಲೋಕವು ಮುಖ್ಯವಾದದ್ದು--

ಸಮ್ಯಗಾರಾಧಿತಾ ವಿದ್ಯಾ
ಪ್ರಬೋಧ ವಿನಯಾವಿವ

ಚೆನ್ನಾಗಿ ಮನನ ಮಾಡಿದ ವಿದ್ಯೆಯು ಅರಿತು ವ್ಯವಹರಿಸಿದ ವಿನಯದಂತೆ. ತಿಳುವಳಿಕೆಯೊಂದಿಗೆ ವಿನಯವೂ ಅತ್ಯವಶ್ಯಕ. ಅನುಶಾಸನ ಹಾಗೂ ತಿಳುವಳಿಕೆ (ಪ್ರಬೋಧಃ) ಈ ಎರಡು ಮುಖ್ಯೋದ್ದೇಶ್ಯ ಎಂಬುದು ಆತನ ಅಭಿಮತ. ಆದರೆ ಯಾವ ಜ್ಯೋತಿಯು ಪ್ರಕಾಶವನ್ನೂ, ಉಷ್ಣತೆಯನ್ನೂ ಕೊಡುವುದೋ ಅದು--

ಯತಸ್ತಯಾ ಜ್ಞಾನಮಶೇಷ ಪ್ರಾಪ್ತಂ
ಲೋಕೇನ ಚೈತನ್ಯ ಮಿವೋಷ್ಣರಶ್ಮೇಃ

ಭಗವಾನ್ ಸೂರ್ಯನಿಂದ ಜನತೆಯು ಪ್ರಬೋಧವನ್ನು ಹೊಂದುವಂತೆ ಸದ್ಗುರುವಿನಿಂದ ಅಶೇಷವಾದ ಜ್ಞಾನವನ್ನು ಹೊಂದಿದ್ದೇಯೆ.

ಈ ರೀತಿಯಾಗಿ ಶಿಕ್ಷಣವು ನಿರಂತರವಾಗಿ ಗಳಿಸಲ್ಪಡುವುದು. ಆದರೂ ಕೂಡ (ಪ್ರಥಮ ಅವಸ್ಥೆಯಲ್ಲಿ) ಶೈಶವಾವಸ್ಥೆಯಲ್ಲಿ ಹೆಚ್ಚಿನದಾಗಿ ಅಭ್ಯಸಿಸಲ್ಪಡಬೇಕು--

ಶೈಶವೇಭ್ಯಸ್ತ ವಿದ್ಯಾನಾಂ

ವಿದ್ಯೆಯಲ್ಲಿ ಅಗಾಧವಾದ ಪಾಂಡಿತ್ಯವನ್ನು ಸತತಾಭ್ಯಾಸದಿಂದಲೇ ಸಂಪಾದಿಸಲು ಶಕ್ಯವೆಂದು ಆತನು ಹೇಳುತ್ತಾನೆ.

ವಿದ್ಯಾಭ್ಯಾಸೇನೈವ
ಪ್ರಸಾದಯಿತುಂ ಅರ್ಹತಿ

ಕಾಳಿದಾಸನು ಜೀವಿಕೆಗಾಗಿಯೇ 'ವಿದ್ಯೆ' ಎಂದು ಒಪ್ಪಿಕೊಳ್ಳಲಾರ.

ಯಸ್ಯಾಗಮಃ ಕೇವಲ ಜೀವಿಕಾಯೈ
ತಂ ಜ್ಞಾನಪಣ್ಯಂ ವಣಿಜಂ ವದಂತಿ

ಯಾರ ಜ್ಞಾನವು ಕೇವಲ ಜೀವಿಕೆಗೋಸ್ಕರ ವಿರುವುದೋ ಅವನನ್ನು ಜ್ಞಾನದಂಗಡಿಯ ಮಾಲೀಕನೆಂದು ಹೇಳುವರು. ವಾಸ್ತವವಾಗಿ ಸುಶಿಕ್ಷಿತನ, ಸುಸಂಸ್ಕೃತನ ಅಸಾಧಾರಣ ಲಕ್ಷಣವು ಸದ್ವಿವೇಕ. ಕೇವಲ ಅಂಧಾನುಕರಣೆಯಲ್ಲ.

ಸಂತಃ ಪರೀಕ್ಷ್ಯಾನ್ಯತರದ್ಭಜಂತೆ
ಮೂಢಃ ಪರಪ್ರತ್ಯಯನೇಯ ಬುದ್ಧಿಃ

ಜ್ಞಾನಿಗಳು ಕೆಡುಕು--ಒಳಿತುಗಳನ್ನು ಪರೀಕ್ಷಿಸಿ ಒಳಿತನ್ನು ಸೇವಿಸುತ್ತಾರೆ. ಅಜ್ಞರು ಪರರ ಮಾತಿನಲ್ಲಿಯೇ ವಿಶ್ವಾಸವಿಡುತ್ತಾರೆ.

ಸುಶಿಕ್ಷಿತನು ಆತ್ಮಪ್ರಶಂಸಕನೂ, ಪ್ರಶಂಸಾಪ್ರಿಯನೂ, ವಾಚಾಳಿಯೂ ಆಗಿರುವುದಿಲ್ಲ. ಮತ್ತೆ ವಿನಯಶೀಲನೂ ಮೌನಿಯೂ ಆಗಿರುತ್ತಾನೆ.

ಜ್ಞಾನೇ ಮೌನಂ ಕ್ಷಮಾ ಶಕ್ತೌ

ಜ್ಞಾನದಲ್ಲಿ ಮೌಮವೂ, ಶಕ್ತಿಯಲ್ಲಿ ಕ್ಷಮೆಯೂ ಇರುತ್ತದೆ.

ಶಿಕ್ಷಣವು ಯಾರಿಗೆ ಕೊಡಲ್ಪಡಬೇಕು ಎನ್ನುವ ವಿಷಯದಲ್ಲಿ ಕಾಳಿದಾಸನ ಅಭಿಪ್ರಾಯ--

ಕ್ರಿಯಾ ಹಿ ವಸ್ತೂಪಹಿತಾ ಪ್ರಸೀದತಿ

(ಯೋಗ್ಯರಲ್ಲಿ ಕ್ರಿಯೆಯು ಫಲಕಾರಿಯಾಗುತ್ತದೆ.) ಯೋಗ್ಯರಿಗೇ ಶಿಕ್ಷಣವನ್ನು ಕೊಡಬೇಕು ಎಂಬುದು ಆತನ ಅಭಿಪ್ರಾಯ. ಯೋಗ್ಯ ಶಿಷ್ಯರಿಗೆ ವಿದ್ಯೆಯನ್ನು ಕಲಿಸುವುದು ಗುರುವಿನ ಆದ್ಯ ಕರ್ತವ್ಯ. ಅಯೋಗ್ಯರಿಗೆ ವಿದ್ಯೆಯನ್ನು ಕಲಿಸಬಾರದು ಎಂಬುದು ಆತನ ಇಂಗಿತ. ಒಂದು ವೇಳೆ ಅಯೋಗ್ಯರನ್ನು ಗುರುವು ಆಯ್ಕೆಮಾಡಿದರೆ ಅದು ಆತನ ದೋಷವೇ ಸರಿ ಎಂದು ಆತನು ಹೇಳುತ್ತಾನೆ--

ವಿನೇತುಃ ಅದ್ರವ್ಯಪರಿಗ್ರಹಃ
ತಸ್ಯ ಬುದ್ಧಿಲಾಘವಂ ಪ್ರಕಾಶಯತಿ

(ಮಾಲ)

(ಅಯೋಗ್ಯನ ಪರಿಗ್ರಹವು ಗುರುವಿನ ಬುದ್ಧಿ ಲಾಘವವನ್ನು ಸೂಚಿಸುತ್ತದೆ.)

(36 ನೇ ಪುಟ ನೋಡಿ)

# ಕಶ್ಯಪ ಋಷಿ

---ಕಂದಾಡೈ ಕೇಶವನ್.

ಬ್ರಹ್ಮನ ಮಾನಸ ಪುತ್ರರು ಮರೀಚಿ, ಅತ್ರಿ, ಆಂಗೀರಸ, ಪುಲಸ್ತ್ಯ, ಪುಲಹ ಹಾಗೂ ಕ್ರತು ಎಂಬುವ ಆರು ಮಹರ್ಷಿಗಳು. ಇವರಲ್ಲಿ ಮೊದಲನೆಯವನಾದ ಮರೀಚಿ ಮಹರ್ಷಿಯ ಪುತ್ರರೇ ಕಶ್ಯಪ ಮಹರ್ಷಿ. ಕಶ್ಯಪರ ತಾಯಿಯು ಕಲೆ. ಕಶ್ಯಪರಿಂದಲೇ ನಮ್ಮ ಪ್ರಜಾಕೋಟಿಯು ಉತ್ಪತ್ತಿಯಾಯಿತು ಎಂಬುವುದಾಗಿ ಭಾರತ, ಭಾಗವತ, ಹರಿವಂಶ, ಮತ್ಸ್ಯಪುರಾಣ, ಮಾರ್ಕಂಡೇಯ, ಲಿಂಗಪುರಾಣಗಳಲ್ಲಿ ಉಕ್ತವಾಗಿವೆ. ಬ್ರಹ್ಮನ ಆದೇಶದಂತೆ ಪ್ರಜಾಸೃಷ್ಟಿಯಲ್ಲಿ ನಿರತನಾಗಿ ಧರ್ಮಜ್ಞನಾಗಿ ತಪಸ್ವಿಯಾಗಿ ಶಾಸ್ತ್ರಜ್ಞನಾಗಿ ದ್ವಿಜಶ್ರೇಷ್ಠನಾಗಿ ಮೆರೆದ ಮಹರ್ಷಿ. ದಕ್ಷಬ್ರಹ್ಮನಿಗೆ ಅದಿತಿ, ದಿತಿ, ದನು, ಕಾಲಾ, ದನಾಯು, ಸಿಂಹಿಕಾ, ಕ್ರೋಧಾ (ಕ್ರೂರಾ) ಪ್ರಾದಾ, ವಿಶ್ವಾ (ಇಲೆ) ವಿನತಾ, ಕಪಿಲಾ, ಮುನಿ, ಕದ್ರು ಎಂಬ ಹದಿಮೂರು ಹೆಣ್ಣುಮಕ್ಕಳು. ಇವರು ಕಶ್ಯಪನನ್ನು ಮದುವೆಯಾಗಿ ಅಸಂಖ್ಯಾತರಾದ ಪುತ್ರಪೌತ್ರರನ್ನು ಪಡೆದರು.

## ಕಶ್ಯಪನ ವಂಶವೃಕ್ಷ :

ಕಶ್ಯಪರಿಗೆ ದಿತಿಯಿಂದ ದೈತ್ಯರು. ಅದಿತಿಯಿಂದ ದೇವತೆಗಳು ಹುಟ್ಟಿದರು. ಕ್ರಮೇಣ ದಕ್ಷಬ್ರಹ್ಮನ ಹದಿಮೂರು ಜನ ಹೆಣ್ಣುಮಕ್ಕಳಿಗೆ ದನುವಿಗೆ ದಾನವರು, ದನಾಯುವಿಗೆ ಸಿದ್ಧರು, ಪ್ರಾದಾಗೆ ಗಂಧರ್ವರು, ಮುನಿಗೆ ಅಪ್ಸರಸಿಯರು, ಸುರಸಾ ಗರ್ಭದಲ್ಲಿ ಯಕ್ಷರು, ನಾಗರು, ಇಳೆಗೆ ವೃಕ್ಷಲತಾತೃಣ ಜಾತಿಗಳು, ಕ್ರೋಧವಶಾಗೆ ಮಾಂಸಾಹಾರಿಗಳಾದ ದುಷ್ಟಜಾತಿಗಳು, ತಾಮ್ರಾಗೆ ಅಶ್ವ, ಗರ್ದಭ, ಗೃಧ್ರಾದಿಗಳು, ಕಪಿಲಾಗೆ ಗೋವುಗಳು, ವಿನತಾಗೆ ಅರುಣ, ಗರುಡ, ಕದ್ರೂಗೆ ಸರ್ಪಗಳು ಜನನವಾದವು. ಅದಿತಿಯಿಂದ ದೇವತೆಗಳು ಜನಿಸಿದರೆ ದೈತ್ಯ ಕುಲಕ್ಕೆ ದಿತಿ ದೇವಿಯೇ ಮಹಾಮಾತೆ.

## ಹಿರಣ್ಯಾಕ್ಷ ಹಿರಣ್ಯಕಶ್ಯಪುಗಳ ಜನನ :

ಕಶ್ಯಪನಿಗೆ ಅದಿತಿಯಿಂದ ದ್ವಾದಶಾದಿತ್ಯರು ಹುಟ್ಟಿ ಲೋಕ ಪ್ರಖ್ಯಾತರಾಗುತ್ತಿದ್ದನ್ನು ಕಂಡು ದಿತಿಗೆ ಬಹಳ ಹೊಟ್ಟೆಕಿಚ್ಚು ಹುಟ್ಟಿತು. ಒಂದು ದಿನ ಸಾಯಂಕಾಲ ಆಕೆಗೆ ಮಿತಿಮೀರಿದ ಕಾಮೋನ್ಮಾದವಾಯಿತು. ಆಗ ಕಶ್ಯಪ ಋಷಿಗಳು ಯಜ್ಞಮಂಟಪದಲ್ಲಿ ಕುಳಿತು ಸಾಯಂಸಂಧ್ಯಾವಂದನೆಯನ್ನು ಮಾಡಲು ಹೊರಟಿದ್ದರು. ದಿತಿಯು ಪತಿಯ ಸಮೀಪಕ್ಕೆ ಬಂದು ಸಂತಾನಾಪೇಕ್ಷೆಯಿಂದ ಕೂಡಿ ತನ್ನನ್ನು ಭೋಗಿಸಲು ಪ್ರಾರ್ಥಿಸಿಕೊಂಡಳು. ಮಹರ್ಷಿಗಳು ಆ ಸಮಯವು ತೀರ ಕೆಟ್ಟಕಾಲವು ಸಮಾಗಮಕ್ಕೆ ಅಯೋಗ್ಯಕಾಲವೆಂದು ಎಷ್ಟು ತಿಳಿಸಿದರೂ ಕೇಳದೆ ಬಲವಂತ ಪಡಿಸಲು ವಿಧಿಯಿಲ್ಲದೆ ಆ ಪ್ರದೋಷಕಾಲದಲ್ಲಿ ಆಕೆಯನ್ನು ಸಮಾಗಮದಿಂದ ತೃಪ್ತ ಪಡಿಸಿದನು. ಆಕೆಯ ಗರ್ಭದಲ್ಲಿ ಜಗತ್ಕಂಟಕನಾದ ಹಿರಣ್ಯಕಶಿಪು ಹುಟ್ಟಿದನು. ಮುಂದೆ ಅವಳ ಗರ್ಭದಲ್ಲಿ ಹಿರಣ್ಯಾಕ್ಷನೂ ಕೂಡ ಹುಟ್ಟಿ ದೇವತೆಗಳಿಗೆ ವೈರಿಗಳಾಗಿ ಮೆರೆದರು.

ಹಿರಣ್ಯಕಶಿಪುವಿಗೆ ಭಕ್ತ ಶ್ರೇಷ್ಠನಾದ ಪ್ರಹ್ಲಾದನು ಹುಟ್ಟಿದನು. ಪ್ರಹ್ಲಾದನ ಮಕ್ಕಳು ವಿರೋಚನ, ಕುಂಭ, ನಿಕುಂಭರು. ವಿರೋಚನನ ಪುತ್ರ ಪ್ರತಾಪಶಾಲಿಯಾದ ಭಕ್ತ ಶಿಖಾಮಣಿ ಬಲಿಚಕ್ರವರ್ತಿ. ಕಶ್ಯಪನ ವಂಶವು ಅಸಂಖ್ಯಾತವಾಗಿ ಬೆಳೆದು ಬಂತು. ಅಂತಹ ಕಶ್ಯಪನ ವಂಶವೃಕ್ಷವನ್ನು ಕೇಳುವುದು ಪುಣ್ಯ ಹಾಗೂ ಆಯುರ್ವರ್ಧಕವು ಎಂಬುವುದಾಗಿ ವ್ಯಾಸರು ಮಹಾಭಾರತದ ಆದಿಪರ್ವದಲ್ಲಿ--

ಆಯುಷ್ಯಶ್ಚೈವ ಪುಣ್ಯಶ್ಚ  
ಧನ್ಯಃ ಶ್ರುತಿ ಸುಖಾವಹಃ  
ಶ್ರೋತವ್ಯಶ್ಚೈವ ಸತತಂ  
ಶ್ರಾವ್ಯಶ್ಚೈವಾನಸೂಯತಾ

ಎಂಬುವುದಾಗಿ ಪ್ರಶಂಸಿಸಿದ್ದಾರೆ. ಮತ್ತೆ ಈ ಮಹಾತ್ಮರ ವಂಶಾವಳಿ ಪಾರಾಯಣ ಪಠಣ ಮಾನವನಿಗೆ "ಶ್ರಿಯಂ ಯಶಃ ಪ್ರೇತ್ಯ ಚ ಶೋಭನಾಂ ಗತಿಮ್" ಸಂಪತ್ತು ಯಶಸ್ಸು, ಸದ್ಗತಿ ಸ್ವತಸ್ಸಿದ್ಧ.

## ವಾಮನ ಅವತಾರ

ದಿತಿಯ ಮಗ ಬಲಿಚಕ್ರವರ್ತಿಯು ೯೯ ಯಜ್ಞಗಳನ್ನು ಮಾಡಿ ನೂರು ಯಜ್ಞಗಳಿಗೆ ಸಿದ್ಧನಾಗಿ ದೇವೇಂದ್ರ ಪಟ್ಟಕ್ಕೆ ಸಿದ್ಧನಾಗುತ್ತಿದ್ದನು. ಇದನ್ನು ತಿಳಿದ ದೇವತೆಗಳು ಅದಿತಿಯನ್ನು ಮರೆ ಹೊಕ್ಕರು. ಇಂದ್ರಾದಿ ದೇವತೆಗಳಿಗೆ ಒದಗಿ ಬರುವ ದುರ್ಗತಿಯನ್ನು ಮನಗೊಂಡ ಅದಿತಿಯು ದುಃಖಿತಳಾಗಿ ತನ್ನ ಪತಿಯಾದ ಕಶ್ಯಪನನ್ನು ಸಮೀಪಿಸಿ ತನ್ನ ದುಃಖವನ್ನು ತೋಡಿಕೊಂಡಳು. ಕಾಶ್ಯಪನು ತನ್ನ ದಿವ್ಯದೃಷ್ಟಿಯಿಂದ ಎಲ್ಲವನ್ನೂ ತಿಳಿದು "ಎಲೆ ದೇವಿ, ನೀನು ಪುತ್ರಮೋಹದಿಂದ ಹೀಗೆ ಕೊರಗಬಾರದು. ಎಲ್ಲವೂ ಭಗವಂತನ ಮಾಯೆ. ಪಂಚಭೂತಗಳಿಂದ ಕೂಡಿದ ಈ ದೇಹವೆಲ್ಲಿ? ಅವೆಲ್ಲಕ್ಕಿಂತಲೂ ವಿಲಕ್ಷಣವಾದ ಆತ್ಮವೆಲ್ಲಿ? ತಾಯಿಮಕ್ಕಳ ಸಂಬಂಧ ಬರೀಭ್ರಮೆ. ಶರೀರ ಮೂಲಕವಾದ ತಾಯಿ ಮಕ್ಕಳ ಸಂಬಂಧಕ್ಕಿಂತ ವಿಲಕ್ಷಣವಾದುದು ಆತ್ಮಸಂಬಂಧ. ಭಗವಂತನನ್ನು ಆರಾಧಿಸು, ನೀನು ಪರಮ ಭಾಗ್ಯಶಾಲಿ. ಪಯೋವ್ರತವನ್ನು ನಿನಗೆ ಉಪದೇಶಿಸುತ್ತೇನೆ. ಅದರಂತೆ ಏಕಾಗ್ರಚಿತ್ತದಿಂದ ಪರಮಾತ್ಮನನ್ನು ಉಪಾಸಿಸಿದರೆ ಅವನು ಪ್ರಸನ್ನನಾಗಿ ನಿನ್ನ ಗರ್ಭದಲ್ಲಿ ಶ್ರೀಹರಿಯು ಜನಿಸುತ್ತಾನೆ. ದೇವತೆಗಳನ್ನು ಉದ್ಧಾರ ಮಾಡುತ್ತಾನೆ ಎಂಬುವುದಾಗಿ ಹೇಳಿದನು. ಪತಿಯ ಆಜ್ಞೆಯಂತೆ ಅದಿತಿಯು ನಿಯಮದಿಂದ ಪಯೋವ್ರತವನ್ನು ಯಥಾವಿಧಿಯಾಗಿ ನಡೆಸಿದಳು. ಭಗವಂತನಾದ ಶ್ರೀಹರಿಯು ಶಂಖ ಚಕ್ರಾದಿ ದಿವ್ಯಾಯುಧಗಳನ್ನು ಧರಿಸಿ ಅವಳಿಗೆ ಪ್ರತ್ಯಕ್ಷನಾದನು. ಅದಿತಿಯು ಪರಮಾತ್ಮನನ್ನು ಕುರಿತು--

ಯಜ್ಞೇಶ ಯಜ್ಞಪುರುಷಾ  
ಅಚ್ಯುತ ತೀರ್ಥಪಾದ  
ತೀರ್ಥ ಶ್ರವಃ  
ಶ್ರವಣ ಮಂಗಲ ನಾಮಧೇಯ  
ಆಪನ್ನ ಲೋಕ  
ವೃಜಿನೋಪ ಶಮೋದಯಾದ್ಯ  
ಶಂ ನಃ ಕೃಧೀಶ  
ಭಗವನ್ನಸಿ ದೀನನಾಥಃ

ಓ ಸರ್ವೇಶ್ವರಾ ನೀನೇ ಸಮಸ್ತ ಯಜ್ಞಗಳಿಗೆ ಅಧಿಪತಿ. ನೀನೇ ಯಜ್ಞಪುರುಷ. ಆಶ್ರಿತರನ್ನು ಕೈಬಿಡದೆ ಕಾಪಾಡುವ ಕರುಣಾಳು. ನಿನ್ನ ಪಾದಜಲವೇ ಪುಣ್ಯಜಲ. ನಿನ್ನ ಕೀರ್ತಿ ಲೋಕಪಾವನವಾದುದು. ನಿನ್ನ ನಾಮೋಚ್ಚಾರಣವು ಸಕಲ ಮಂಗಳಕರವು. ಆಪತ್ತಿನಲ್ಲಿ ಸಿಕ್ಕಿದವರನ್ನು ಶರಣಾಗತರಾದವರನ್ನು ಉದ್ಧಾರಮಾಡಲು ಅವತಾರಗಳನ್ನೆತ್ತಲು ಬದ್ಧಕಂಕಣನಾದವನು" ಎಂಬುವುದಾಗಿ ಸ್ತುತಿಸಿದಳು. ಆಗ ಪರಮಾತ್ಮನು 'ತಾಯಿಯೇ ನಿನ್ನ ಪತಿಯಾದ ಕಶ್ಯಪನ ತಪಸ್ಸಿಗೆ ಮೆಚ್ಚಿ ನಾನು ನಿನ್ನ ಗರ್ಭದಲ್ಲಿ ಪುತ್ರನಾಗಿ ಜನಿಸಿ ದೇವತೆಗಳಿಗೆ ಉಪಕಾರಮಾಡುವೆನು' ಎಂಬುವುದಾಗಿ ವಾಗ್ದಾನ ಮಾಡಿದನು. ಕೆಲವು ದಿನಗಳ ತರುವಾಯ ಶ್ರೀಹರಿಯು ಅದಿತಿಯ ಗರ್ಭದಲ್ಲಿ ವಾಮನನಾಗಿ ಜನಿಸಿದನು. ಶ್ರವಣ ನಕ್ಷತ್ರದಲ್ಲಿ ಭಾದ್ರಪದ ಶುದ್ಧ ದ್ವಾದಶೀ ದಿನದಲ್ಲಿ ಅಭಿಜಿತ್ ಮುಹೂರ್ತದಲ್ಲಿ ಸಕಲ ಗ್ರಹ ನಕ್ಷತ್ರಗಳು ಶುಭಯುಕ್ತವಾಗಿರುವಾಗ ವಾಮನನು ಅದಿತಿಯ ಗರ್ಭ

ದಿಂದ ಜನಿಸಿದನು. ಭಗವಂತನು ಜನಿಸಿದ ಆದಿನವನ್ನೇ ವಿಜಯದ್ವಾದಶಿಯೆಂದು ಕರೆಯುತ್ತಾರೆ. ಕಶ್ಯಪನು ಮಗುವಿಗೆ ಜಾತಕರ್ಮದಲ್ಲಿ ವಾಮನನೆಂದು ನಾಮಕರಣ ಮಾಡಿದರು.

ಯುಕ್ತವಯಸ್ಸಿನಲ್ಲಿ ಕಶ್ಯಪನಿಂದ ವಾಮನನಿಗೆ ಉಪನಯನ ಸಂಸ್ಕಾರವು ನಡೆಯಿತು. ವಾಮನನ ಉಪನಯನದ ಘಟ್ಟವು ಭಾಗವತದ ಅಷ್ಟಮಸ್ಕಂದದ ೧೮ನೇ ಅಧ್ಯಾಯದಲ್ಲಿ ಬಹಳ ಸೊಗಸಾಗಿ ವ್ಯಾಸರು ವರ್ಣಿಸಿದ್ದಾರೆ.

ತಸ್ಯೋಪನೀಯ ಮಾನಸ್ಯ
ಸಾವಿತ್ರೀಂ ಸವಿತಾಬ್ರವೀತ್
ಬೃಹಸ್ಪತಿಃ ಬ್ರಹ್ಮಸೂತ್ರಂ
ಮೇಖಲಾಂ ಕಶ್ಯಪೋಽದದಾತ್
ದದೌ ಕೃಷ್ಣಾಜಿನಂ ಭೂಮಿರ್ದಂಡಂ
ಸೋಮೋವನಸ್ಪತಿಃ
ಕೌಪೀನಾಽಚ್ಛಾದನಂ ಮಾತಾ
ದ್ಯೌಶ್ಛತ್ರಂ ಜಗತಃ ಪತೇಃ......

ಸೂರ್ಯನು ಸಾಕ್ಷಾತ್ತಾಗಿ ತಾನೇ ವಟುವಿಗೆ ಸಾವಿತ್ರೀ ಮಂತ್ರವನ್ನು ಉಪದೇಶಿಸಿದನು. ಬೃಹಸ್ಪತಿಯು ಯಜ್ಞೋಪವೀತವನ್ನು, ಕಶ್ಯಪನು ಮೌಂಜಿಯನ್ನು, ಭೂದೇವಿ ಕೃಷ್ಣಾಜಿನವನ್ನು, ಚಂದ್ರನು ದಂಡವನ್ನು, ತಾಯಿ ಅದಿತಿ ಕೌಪೀನವನ್ನು, ದ್ಯುದೇವತೆ ಛತ್ರವನ್ನು, ಬ್ರಹ್ಮನು ಕಮಂಡಲವನ್ನು, ಸಪ್ತರ್ಷಿಗಳು ಪವಿತ್ರವನ್ನು, ಸರಸ್ವತಿ ಮಾತೆ ಅಕ್ಷಮಾಲಿಕೆಯನ್ನು, ಕುಬೇರನು ಭಿಕ್ಷಾಪಾತ್ರೆಯನ್ನು ನೀಡಿದರು. ಪಾರ್ವತಿ ದೇವಿ ಭಿಕ್ಷೆಯನ್ನು ನೀಡಿದಳು. ಕಶ್ಯಪನು ಹೋಮಾಗ್ನಿಯನ್ನು ಪ್ರತಿಷ್ಠಾಪನೆಮಾಡಿ ವಿಧಿಯುಕ್ತವಾಗಿ ಅಗ್ನಿಯನ್ನು ಪೂಜಿಸಿ ಹೋಮಕರ್ಮಾದಿಗಳನ್ನು ಮಾಡಿದನು. ಇತ್ತ ಬಲಿಚಕ್ರವರ್ತಿ ತಮ್ಮ ಕುಲ ಪುರೋಹಿತರಾದ ಶುಕ್ರಾಚಾರ್ಯರೊಡನೆ ನೂರನೆಯ ಅಶ್ವಮೇಧಯಾಗವನ್ನು ಆರಂಭಿಸಿದ್ದನು. ವಾಮನನು ಋಷಿಗಳ ಆದೇಶದಂತೆ ದೇವತೆಗಳ ಹಿತವನ್ನು ಕೋರಿ ಬಲಿಚಕ್ರವರ್ತಿಯಾಗ ಮಾಡುತ್ತಿದ್ದ ನರ್ಮದಾತೀರದ ಭೃಗುವತ್ಸಕವೆಂಬ ಕ್ಷೇತ್ರಕ್ಕೆ ಬಾಲ ಸೂರ್ಯನಂತೆ ಯಜ್ಞಶಾಲೆಗೆ ನಡೆದುಬಂದನು. ಈ ಬಾಲವಟುವನ್ನು ಕಂಡ ಎಲ್ಲರೂ ಆತನ ತೇಜಸ್ಸಿಗೆ ಮರಳಾಗಿ ಮೂಕರಾಗಿ ನೋಡುತ್ತಿದ್ದರು. ಬಲಿಚಕ್ರವರ್ತಿಯೂ ಕೂಡ ಈತನ ತೇಜಸ್ಸಿಗೆ, ಸೌಂದರ್ಯಕ್ಕೆ ಮೋಹಿತನಾಗಿ ಅರ್ಘ್ಯ--ಪಾದ್ಯಗಳನ್ನು ನೀಡಿ ಉಚಿತಾಸನವನ್ನು ನೀಡಿ ಸತ್ಕರಿಸಿದನು. ಬ್ರಹ್ಮರುದ್ರಾದಿ ದೇವತೆಗಳೂ ಕೂಡ ಯಾರ ಪಾದತೀರ್ಥವೆನಿಸಿಕೊಂಡ ಗಂಗೆಯನ್ನು ತಲೆಯಲ್ಲಿ ಧರಿಸಿ ಪವಿತ್ರವೆನಿಸಿಕೊಂಡರೋ ಅಂತಹ ಪರಮೇಶ್ವರನ ಪಾದಗಳನ್ನು ಬಲಿಯು ತನ್ನ ಕೈಯಿಂದ ತೊಳೆದು ಪ್ರೋಕ್ಷಿಸಿಕೊಂಡು ಆ ಬ್ರಹ್ಮಚಾರಿಯನ್ನು ಕುರಿತು--

ಸ್ವಾಗತಂ ತೇ ನಮಸ್ತುಭ್ಯಂ
ಬ್ರಹ್ಮನ್ಕಿಂ ಕರವಾಮತೇ
ಬ್ರಹ್ಮರ್ಷೀಣಾಂ ತಪಃ ಸಾಕ್ಷಾತ್
ಮನ್ಯೇ ತ್ವಾರ್ಯ ವಪುರ್ಧರಮ್
ಅದ್ಯನಃ ಪಿತರಃ ತೃಪ್ತಾ
ಅದ್ಯನಃ ಪಾವಿತಂ ಕುಲಂ
ಅದ್ಯ ಸ್ವಿಷ್ಟಃ ಕ್ರತುರಯಂ
ಯದ್ ಭವಾನಾಗತೋ ಗೃಹಾನ್

ಓ ಬ್ರಾಹ್ಮಣೋತ್ತಮ, ನಿನಗೆ ವಂದನೆಗಳು. ನೀನು ನನ್ನ ಮನೆಗೆ ಬಂದುದರಿಂದ ನಮ್ಮ ಪಿತೃಗಳು ತೃಪ್ತರಾದರು, ನಮ್ಮ ಕುಲವು ಪಾವನವಾಯಿತು ನನ್ನ ಯಜ್ಞವೂ ಸಫಲವಾಯಿತು -- ಎಂಬುವುದಾಗಿ ಸ್ತೋತ್ರಮಾಡಿದನು. ಮತ್ತೆ ವಟುವಿನ ಕೋರಿಕೆಯೇನು ಅವನ ಅಪೇಕ್ಷೆಯನ್ನು ತಾನು ತಪ್ಪದೆ ತೀರಿಸುವೆನು ಎಂಬುವುದಾಗಿ ವಾಗ್ದಾನವನ್ನು ಮಾಡಿದನು. ವಾಮನನು ಬಲಿಚಕ್ರವರ್ತಿಯನ್ನು ಮೂರಡಿ ನೆಲವನ್ನು ಮಾತ್ರ ಯಾಚಿಸಿದನು. ಕುಲ ಪುರೋಹಿತನಾದ ಶುಕ್ರಾಚಾರ್ಯರು, ವಟುವು ಸ್ವತಃ ವಿಷ್ಣುವು ಮೋಸಹೋಗಬಾರದೆಂದು, ಎಷ್ಟು ಹೇಳಿದರೂ ಬಲಿಯು ವಾಮನನಿಗೆ ಕೊಟ್ಟ ಮಾತಿಗೆ ತಪ್ಪದೆ ಭೂಮಿಯನ್ನು ದಾರೆಯೆರೆದನು. ವಾಮನನು ತ್ರಿವಿಕ್ರಮನಾಗಿ ಬೆಳೆದು ಭೂಮಿ ಆಕಾಶಗಳೆಲ್ಲವನ್ನೂ ತನ್ನ ಎರಡಡಿಗಳಲ್ಲಿ ಆಕ್ರಮಿಸಿಕೊಂಡರು. ಮೂರನೆಯ ಹೆಜ್ಜೆಗೆ ಸ್ಥಳವೆಲ್ಲಿ ಎಂಬುವುದಾಗಿ ಬಲಿಯನ್ನು ವಾಮನನು ಕೇಳಲು, ಬಲಿಚಕ್ರವರ್ತಿ ಮೂರನೆಯ ಅಡಿ .ತನ್ನ ತಲೆ ಮೇಲೆ ಇಡಲು ಪ್ರಾರ್ಥಿಸಿ ಕೃತಾರ್ಥನಾದನು. ಒಲಿದುಬಂದ ವಾಮನನು ಬಲಿಯ ಭಕ್ತಿಗೆ ಮೆಚ್ಚಿ ಪ್ರಹ್ಲಾದನೊಡನೆ ಬಲಿಯು ಚಿರಂಜೀವಿಯಾಗಿ ಸುತಲದಲ್ಲಿ ನೆಲೆಸಿರುವಂತೆ ವರವನ್ನು ನೀಡಿದನು. ಕಶ್ಯಪನು ಒಮ್ಮೆ ಯಜ್ಞಮಾಡಲು ವರುಣನ ಬಳಿಗೆ ಹೋಗಿ ಗೋವುಗಳನ್ನು ಎರವಲಾಗಿ ತಂದು, ಯಜ್ಞಮುಗಿದ ಮೇಲೆ ವರುಣನು ಎಷ್ಟು ಬೇಡಿದರೂ ಗೋವುಗಳನ್ನು ಹಿಂತಿರುಗಿ ಕೊಡಲಿಲ್ಲ. ವರುಣನು ಕೋಪಗೊಂಡು ಕಶ್ಯಪನೂ ಅವನ ಪತ್ನಿಯರಿಬ್ಬರೂ ಮನುಷ್ಯರಾಗಿ ಜನಿಸಿ ದನ ಕರುಗಳನ್ನು ನಿರ್ಬಂಧದಲ್ಲಿಟ್ಟುಕೊಂಡ ಕಾರಣ ಕಾರಾಗೃಹವಾಸ ಅನುಭವಿಸುವಂತೆ ಶಾಪ ಕೊಟ್ಟನು. ವರುಣನ ಶಾಪದಂತೆ ಕಶ್ಯಪ ಅದಿತಿ ದಿತಿಯರು ದ್ವಾಪರಯುಗದಲ್ಲಿ ವಸುದೇವ ದೇವಕಿ ರೋಹಿಣಿಯರಾಗಿ ಜನಿಸಿದರು, ರಾಮಾವತಾರದಲ್ಲಿ ಅದಿತಿ ಕಶ್ಯಪರು ಕೌಸಲ್ಯಾ ದಶರಥರಾಗಿ ಜನಿಸಿದರು.

## ತಕ್ಷಕ ಮತ್ತು ಕಾಶ್ಯಪರು :

ಪಾಂಡವರ ವಂಶಜನಾದ ಪರೀಕ್ಷಿತರಾಜನು ಹಸ್ತಿನಾಪುರದಲ್ಲಿ ಧರ್ಮದಿಂದ ರಾಜ್ಯವಾಳುತ್ತಿದ್ದನು. ಈತ ಉತ್ತರೆಯ ಗರ್ಭದಲ್ಲಿರುವಾಗ ಅಶ್ವತ್ಥಾಮನು ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ಮೃತನಾಗಿ ಶ್ರೀಕೃಷ್ಣನ ಮಹಿಮೆಯಿಂದ ಬದುಕಿಬಂದ ಮಹಾನುಭಾವ. ಗರ್ಭದಲ್ಲಿರುವಾಗಲೇ ಭಗವಂತನ ದರ್ಶನ ಪಡೆದ ಭಕ್ತಾಗ್ರೇಸರನು. ಒಮ್ಮೆ ಈತ ಬೇಟೆಗೆ ಹೋಗಿ ಜಿಂಕೆಯನ್ನು ಬೆನ್ನಟ್ಟಿ ಹೋದಾಗ ಜಿಂಕೆ ತಪ್ಪಿಸಿಕೊಳ್ಳಲು ಸಮಾಧಿಸ್ಥನಾದ ಶಮೀಕ ಮುನಿಯನ್ನು ಪ್ರಾರ್ಥಿಸಲು ಆತನು ಮೌನದಿಂದ ಇರುವುದನ್ನು ಕಂಡು ಅಲ್ಲಿಯೇ ಸತ್ತುಬಿದ್ದಿದ್ದ ಒಂದು ಹಾವನ್ನು ತೆಗೆದು ಮುನಿಯ ಕೊರಳಿಗೆ ಮಾಲೆ ಹಾಕಿ ಹಸ್ತಿನಾಪುರಕ್ಕೆ ಹಿಂತಿರುಗಿದನು. ಹೊರಗೆ ಹೋಗಿದ್ದ ಶಮೀಕ ಪುತ್ರನಾದ ಶೃಂಗಿ ಮಹಾಮುನಿ ಅಲ್ಲಿಗೆ ಬಂದು ತಂದೆಯ ಅವಸ್ಥೆಯನ್ನು ಕಂಡು ಕ್ರೋಧಪರವಶನಾಗಿ "ನನ್ನ ತಂದೆಗೆ ಅವಮಾನ ಮಾಡಿದ ಪರೀಕ್ಷಿದ್ರಾಜನು ಇಂದಿಗೆ ಏಳು ದಿನಗಳೊಳಗೆ ಸರ್ಪಕಚ್ಚಿ ಸಾಯಲಿ. ವಿಷಧರನಾದ ತಕ್ಷಕನು ನನ್ನೀ ಶಾಪದಿಂದ ಚೋದಿತನಾಗಿ ಇಂದಿಗೆ ಏಳು ರಾತ್ರಿಗಳ ಒಳಗೆ ಅವನನ್ನು ಕಚ್ಚಿ ಸಾಯಿಸಲಿ" ಎಂಬುದಾಗಿ ಶಾಪವನ್ನಿತ್ತನು. ಸಮಾಧಿಯಿಂದ ಎಚ್ಚತ್ತ ಶಮೀಕಮುನಿ ತನ್ನ ಮಗನ ಅವಿವೇಕಕ್ಕೆ ದುಃಖಿತನಾಗಿ ತನ್ನ ಶಿಷ್ಯನಾದ ಗೌರಮುಖನ ಮೂಲಕ ಪರೀಕ್ಷಿತನಿಗೆ ಶಾಪದ ವಾರ್ತೆಯನ್ನು ಹೇಳಿಕಳುಹಿಸಿದನು. ಪರೀಕ್ಷಿದ್ರಾಜನು ತಾನುಮಾಡಿದ ಅಕಾರ್ಯಕ್ಕಾಗಿ ದುಃಖಿಸಿದನು. ಗೌರಮುಖನನ್ನು ಯಥೋಚಿತವಾಗಿ ಸತ್ಕಾರಮಾಡಿ ತಾನು ಮಾಡಿದ ಅಕಾರ್ಯಕ್ಕೆ ನೊಂದು ತನ್ನನ್ನು ಕ್ಷಮಿಸುವಂತೆ ಶಮೀಕಮಹರ್ಷಿಗೆ ಹೇಳಿಕಳುಹಿಸಿದನು. ಪರೀಕ್ಷಿತನು ತಕ್ಷಣವೇ ತನ್ನ ಮಗನಾದ ಜನಮೇಜಯನನ್ನು ರಾಜನನ್ನಾಗಿ ಮಾಡಿ ಸರ್ಪಗಳಿಗೆ ಅಗಮ್ಯವಾದ ಒಂದೇಸ್ಥಂಭದಿಂದ ಕೂಡಿದ ಅರಮನೆಯನ್ನು ಸಮುದ್ರದ ಮಧ್ಯದಲ್ಲಿ ಕಟ್ಟಿಸಿ, ಮಂತ್ರಸಿದ್ಧಿಯನ್ನು ಪಡೆದ ಬ್ರಾಹ್ಮಣರನ್ನೂ ವಿಷವೈದ್ಯರನ್ನೂ ವ್ಯವಸ್ಥೆಮಾಡಿಕೊಂಡನು. ರಾಜನ ಪ್ರಾಣವನ್ನು ಉಳಿಸಲು ಸಮರ್ಥನಾದ ಕಾಶ್ಯಪ ಋಷಿ ಹಸ್ತಿನಾಪುರದತ್ತ ಬರುತ್ತಿದ್ದನು. ಋಷಿಯ ಶಾಪದಿಂದ ಪ್ರಚೋದಿತನಾದ ತಕ್ಷಕನೂ ಕೂಡ ಹಸ್ತಿನಾಪುರಕ್ಕೆ ಬರುತ್ತಿದ್ದನು. ಇತ್ತ ಪರೀಕ್ಷಿತ್ತು ವ್ಯಾಸಪುತ್ರನಾದ

ಶುಕಮುನಿಯಿಂದ ಭಾಗವತ ಮಹಾಪುರಾಣವನ್ನು ಶ್ರವಣಮಾಡುತ್ತಲಿದ್ದನು. ದಾರಿಯಲ್ಲಿ ತಕ್ಷಕನೂ ಕಾಶ್ಯಪರು ಪರಸ್ಪರ ಭೇಟಿಯಾದರು. ತಕ್ಷಕನು ವೃದ್ಧಬ್ರಾಹ್ಮಣ ವೇಷವನ್ನು ಧರಿಸಿ "ಬ್ರಾಹ್ಮಣೋತ್ತಮ, ಇಷ್ಟು ಅವಸರದಿಂದ ಎಲ್ಲಿಗೆ ಹೋಗುತ್ತಿರುವಿ. ಯಾವ ಕಾರ್ಯನಿಮಿತ್ತವಾಗಿ ಹೋಗುತ್ತಿರುವಿ ಎಂಬುವುದಾಗಿ ಕೇಳಲು -- ಕಾಶ್ಯಪನು "ವಿಪ್ರವರ್ಯ ಪರೀಕ್ಷಿದ್ರಾಜನನ್ನು ತಕ್ಷಕನು ಕಚ್ಚಿ ಸಾಯಿಸುತ್ತಾನಂತೆ. ಅವನ ಪ್ರಾಣವನ್ನು ರಕ್ಷಿಸಲು ಹೋಗುತ್ತಿದ್ದೇನೆ" ಎಂಬುವುದಾಗಿ ಉತ್ತರಕೊಟ್ಟನು. ಆಗ ವಿಪ್ರ ವೇಷದಲ್ಲಿದ್ದ ತಕ್ಷಕನು "ಬ್ರಾಹ್ಮಣೋತ್ತಮ, ನಾನೇ ತಕ್ಷಕನು. ನಾನು ಕಚ್ಚಿದ ವಿಷವನ್ನು ನಿವಾರಿಸಲು ಯಾರಿಗೂ ಸಾಧ್ಯವಿಲ್ಲ. ಸುಮ್ಮನೇ ಏಕೆ ಆಯಾಸಪಡುವೆ ಹಿಂತಿರುಗಿಹೋಗು, ನಾನು ಕಚ್ಚಿದ್ದಕ್ಕೆ ನೀನು ಚಿಕಿತ್ಸೆ ಮಾಡುವೆಯಾದರೆ ಪರೀಕ್ಷಿಮಾಡೋಣ. ನಾನು ಬೆಳೆದು ನಿಂತ ಈ ವಟವೃಕ್ಷವನ್ನು ಕಚ್ಚಿ ದಹಿಸುತ್ತೇನೆ. ನಿನ್ನ ಮಂತ್ರಬಲದಿಂದ ಅದನ್ನು ರಕ್ಷಿಸು" ಎಂಬುವುದಾಗಿ ತಿಳಿಸಿ ಅಂತೆಯೇ ವಟವೃಕ್ಷವನ್ನು ಕಚ್ಚಲು ಅದು ಉರಿಯಲಾರಂಬಿಸಿತು. ಕಾಶ್ಯಪನು ಶುದ್ಧಾಚಮನ ಮಾಡಿ ಸಂಜೀವಿನಿ ಮಂತ್ರವನ್ನು ಜಪಿಸಲು ವಟವೃಕ್ಷವು ಚಿಗುರಿ ಶಾಖೋಪಶಾಖೆಗಳಾಗಿ ಬೆಳೆದು ನಿಂತಿತು. ಆಗ ತಕ್ಷಕನು "ಬ್ರಾಹ್ಮಣೋತ್ತಮ, ರಾಜನಿಗೆ ಚಿಕಿತ್ಸೆಮಾಡುವ ಉದ್ದೇಶವೇನು? ರಾಜನು ಬ್ರಾಹ್ಮಣನ ಶಾಪಕ್ಕೆ ಗುರಿಯಾಗಿದ್ದಾನೆ. ಅವನ ಆಯಸ್ಸೂ ಮುಗಿದಿದೆ. ಬ್ರಾಹ್ಮಣನ ಶಾಪದ ಮುಂದೆ ನಿನ್ನ ಮಂತ್ರ ಪ್ರಭಾವ ಫಲದಾಯಕವಾಗದಿದ್ದರೆ ನಿನಗೂ ಕಲಂಕ" ಎಂಬುವುದಾಗಿ ಹೇಳಲು, ಕಾಶ್ಯಪನು ತಾನು ಧನಾರ್ಥಿಯಾಗಿ ಅಲ್ಲಿಗೆ ಹೋಗುತ್ತಿದ್ದೇನೆ ಎಂಬುವುದಾಗಿ ತಿಳಿಸಲು, ತಕ್ಷಕನು ತಾನು ಕಾಶ್ಯಪನಿಗೆ ಹೇರಳ ಹಣವನ್ನು ಕೊಡುವೆನೆಂದು ಹೇಳಿ, ಅಂತೆಯೇ ಕಾಶ್ಯಪನಿಗೆ ತಕ್ಷಕನು ಅಪಾರ ಹಣವನ್ನು ನೀಡಿದನು. ಬ್ರಾಹ್ಮಣನ ಶಾಪದಂತೆ ತಕ್ಷಕನು ಸಣ್ಣಕ್ರಿಮಿಯಾಗಿ ಹಣ್ಣಿನಲ್ಲಿ ಸೇರಿಕೊಂಡು, ಪರೀಕ್ಷಿದ್ರಾಜನನ್ನು ಕಚ್ಚಿ ಕೊಂದನು.

## ಕಶ್ಯಪ ಸಿದ್ಧರ ಸಂವಾದ

ಕೌರವರ ವಿನಾಶವಾದನಂತರ ಅರ್ಜನನು ಶ್ರೀಕೃಷ್ಣನನ್ನು ಕುರಿತು "ಸ್ವಾಮಿ ಯುದ್ಧದ ಮಧ್ಯದಲ್ಲಿ ನೀನು ಉಪದೇಶಿಸಿದ ಗೀತೆಯನ್ನು ಮತ್ತೊಮ್ಮೆ ಕೇಳಬೇಕೆಂದಿರುವೆನು ಎಂಬುವುದಾಗಿ ಪ್ರಾರ್ಥಿಸಿಕೊಳ್ಳಲು, ದೇವಕೀನಂದನು ಹಿಂದೊಮ್ಮೆ ಧರ್ಮಜ್ಞನಾದ ಕಾಶ್ಯಪನ ಹಾಗೂ ಸಿದ್ಧರ ಸಂವಾದವೂ ಕೂಡ ಪರಬ್ರಹ್ಮತತ್ವವನ್ನೂ ಮೋಕ್ಷಧರ್ಮವನ್ನು ಉಪದೇಶಿಸುತ್ತೆ ಅದನ್ನು ನಿನಗೆ ವಿವರವಾಗಿ ಹೇಳುವೆನು ಕೇಳು ಎಂಬುವುದಾಗಿ ಹೇಳಿದನು.

ಕಾಶ್ಯಪ ಸಿದ್ಧರ ಸಂವಾದವು ಧರ್ಮಶಾಸ್ತ್ರಗಳ ತಿರಳು. ಭೂತ ಭವಿಷ್ಯತ್‌ಗಳನ್ನೂ, ಸುಖದುಃಖಗಳ ರಹಸ್ಯವನ್ನೂ, ಹುಟ್ಟುಸಾವುಗಳ ಹಿನ್ನೆಲೆಯನ್ನೂ ಪಾಪಪುಣ್ಯಗಳ ವಿವೇಚನೆಯನ್ನೂ, ತಿಳಿಸುವ ಕರ್ಮಜ್ಞಾನ ಭಕ್ತಿ ಮೋಕ್ಷಧರ್ಮಗಳ ಸಾರ ಎಂಬುವುದಾಗಿ ತಿಳಿಸಿ ಕಾಶ್ಯಪ ಸಿದ್ಧರ ಸಂವಾದ ರೂಪಕವಾದ ಮೋಕ್ಷಧರ್ಮವನ್ನು ಹೇಳಲುಪಕ್ರಮಿಸಿದ ಸ್ವತಃ ಭಗವಾನ್ ದೇವಕೀನಂದನ. ಸಿದ್ಧಿ ಪುರುಷನು ಕಾಶ್ಯಪನನ್ನು ಕುರಿತು--

ವಿವಿಧೈಃ ಕರ್ಮಭಿಸ್ತಾತ
ಪುಣ್ಯಯೋಗೈಶ್ಚ ಕೇವಲೈಃ
ಗಚ್ಛನ್ತೀಹ ಗತಿಂ ಮರ್ತ್ಯಾ
ದೇವಲೋಕೇ ಚ ಸಂಸ್ಥಿತಮ್

ಮಗು ಕಾಶ್ಯಪ ಮಾನವರು ಹಲವು ಶುಭಕರ್ಮಗಳನ್ನು ಆಚರಿಸಿ ಪಡೆದ ಮಹಾ ಪುಣ್ಯದಿಂದಲೇ ಈ ಲೋಕದಲ್ಲಿ ಉತ್ತಮ ಫಲವನ್ನೂ ಸ್ವರ್ಗವನ್ನು ಪಡೆಯುತ್ತಾರೆ. ಮತ್ತೆ--

ನ ಕ್ವಚಿತ್ ಸುಖಮತ್ಯಂತಂ
ನ ಕ್ವಚಿತ್ ಶಾಶ್ವತೀ ಸ್ಥಿತಿಃ
ಸ್ಥಾನಾಚ್ಚ ಮಹತೋಭ್ರಂಶೋ
ದುಃಖ ಲಬ್ಧಾತ್ ಪುನಃ ಪುನಃ

ಜೀವನಿಗೆ ಎಲ್ಲಿಯೂ ಪರಮ ಸುಖವಿಲ್ಲ. ಯಾವ ಲೋಕದಲ್ಲೂ ಅವನಿಗೆ ಶಾಶ್ವತ ಸ್ಥಾನವಿಲ್ಲ. ಬಹಳ ಕಷ್ಟಪಟ್ಟು ಪಡೆದ ತಪಸ್ಸಿನ ಫಲದಿಂದ ತಕ್ಕ ಮೇಲು ಸ್ಥಾನಗಳನ್ನು ಪಡೆದು ಪುನಃ ಕೆಳಗಿಳಿಯುತ್ತಾನೆ.

ಪುನಃ ಪುನಶ್ಚ ಮರಣಂ ಜನ್ಮಚೈವ ಪುನಃ ಪುನಃ --ಇದು ಸತ್ಯ. ಹಾಗೆಯೇ ಪ್ರಿಯೈರ್ವಿವಾಸೋ ಬಹುಶಃ (ಹಲವು ಜನ್ಮಗಳಲ್ಲಿ ಪ್ರಿಯರ ವಿಯೋಗ) ಕಷ್ಟದಿಂದ ಸಂಪಾದಿಸಿದ್ದ ಧನನಾಶ (ಧನನಾಶಶ್ಚ ಸಂಪ್ರಾಪ್ತೋಲಬ್ಧ್ವಾ ದುಃಖೇನ ತದ್ಧನಮ್) ಹೀಗೆ ಇರುವಾಗ ಒಮ್ಮೆ ಅತ್ಯಂತ ನಿರಾಶೆಯಿಂದ ನಿರಾಕಾರ ನಾದ ಭಗವಂತನನ್ನು ಭಜಿಸಿ ಲೋಕವ್ಯವಹಾರವನ್ನು ಸಂಪೂರ್ಣವಾಗಿ ಬಿಟ್ಟು ಈ ಬ್ರಹ್ಮತತ್ವ ತಿಳಿದು ಪರಮಾತ್ಮನ ಕೃತಿಯಿಂದ ಸಿದ್ಧಿಯನ್ನು ಪಡೆದೆನು ಎಂಬುವುದಾಗಿ ಸಿದ್ದರು ತಮ್ಮ ಸ್ವಾನುಭವವನ್ನು ಕಾಶ್ಯಪರಿಗೆ ತಿಳಿಸಿದರು. ಪುನಃ ಸಿದ್ಧಿಯು ಕಾಶ್ಯಪನೇ ನನಗೆ ಈಗ ಉತ್ತಮ ಸಿದ್ಧಿ ಲಭಿಸಿದೆ. ಇದಕ್ಕಿಂತ ಉತ್ತಮ ಲೋಕಕ್ಕೆ ಸತ್ಯಲೋಕಕ್ಕಿಂತ ಪರಮಾತ್ಮನ ಸನ್ನಿದಿಗೆ ನಾನು ಹೋಗುತ್ತೇನೆ.

ನಾಹಂ ಪುನರಿಹಾಗಂತಾ
ಮರ್ತ್ಯಲೋಕಂ ಪರಂತಪ

ನಾನು ಪುನಃ ಮರ್ತ್ಯ ಲೋಕಕ್ಕೆ ಹೋಗುವುದಿಲ್ಲ ನೀನು ಏನು ಕೇಳಬೇಕೋ ಅದನ್ನು ಕೇಳು ನಾನು ನಿನಗೆ ಮಾರ್ಗದರ್ಶನವನ್ನು ನೀಡುತ್ತೇನೆ -- ಎಂಬುವುದಾಗಿ ಹೇಳಿದನು. ಆಗ ಕಾಶ್ಯಪರು ಸಿದ್ಧಿಯ ಎರಡು ಕಾಲುಗಳಿಗೆ ನಮಸ್ಕರಿಸಿ--

ಕಥಂ ಶರೀರಂ ಚ್ಯವತೇ
ಕಥಂ ಚೈವೋಪ ಪದ್ಯತೇ
ಕಥಂ ಕಷ್ಟಾಚ್ಚ ಸಂಸಾರಾತ್
ಸಂಸರನ್ಪರಿಮುಚ್ಯತೇ

ಈ ಶರೀರವು ಹೇಗೆ ಬಿದ್ದುಹೋಗುತ್ತದೆ. ಜೀವನು ಮತ್ತೊಂದು ಶರೀರವನ್ನು ಹೇಗೆ ಹೊಂದುತ್ತದೆ. ಹೇಗೆ ಜೀವನು ವಿಮುಕ್ತನಾಗುತ್ತಾನೆ. ಮನುಷ್ಯನು ತಾನು ಮಾಡಿದ ಶುಭಾಶುಭ ಕರ್ಮಗಳನ್ನು ಹೇಗೆ ಅನುಭವಿಸುತ್ತಾನೆ ಎಂಬುವುದಾಗಿ ಹಲವಾರು ಪ್ರಶ್ನೆಗಳನ್ನು ಹಾಕಲು, ಸಿದ್ಧನು ಅದಕ್ಕೆ ಉತ್ತರವಾಗಿ--

ಆಯುಃ ಕೀರ್ತಿ ಕರಾಣೀಹ
ಯಾನಿ ಕೃತ್ಯಾನಿ ಸೇವತೇ
ಶರೀರಗ್ರಹಣೇ ಯಸ್ಮಿ
ತೇಷು ಕ್ಷೀಣೇಷು ಸರ್ವಶಃ
ಆಯುಃ ಕ್ಷಯ ಪರೀತಾತ್ಮಾ
ವಿಪರೀತಾನಿ ಸೇವತೇ
ಬುದ್ಧಿರ್ವ್ಯಾವರ್ತತೇ ಚಾಸ್ಯ
ವಿನಾಶೇ ಪ್ರತ್ಯುಪಸ್ಥಿತೇ

ಮನುಷ್ಯನು ಶುಭಕರ್ಮಗಳನ್ನು ಮಾಡಿ ಅದಕ್ಕೆ ತಕ್ಕಂತಹ ಆಯಸ್ಸು ಕೀರ್ತಿ ಪಡೆದು ಕರ್ಮಫಲ ತಕ್ಕ ಶರೀರ ಹೊಂದುವನು. ಶುಭ ಫಲ ಕ್ಷೀಣಿಸಲಾಗಿ ವಿನಾಶಕಾಲ ಬಂದಾಗ ಬುದ್ಧಿ ವ್ಯತ್ಯಾಸವಾಗುತ್ತದೆ. ಶರೀರದಲ್ಲಿ ವಾತವು ಹೆಚ್ಚಿ ಪಿತ್ತ ಕೆರಳಿ, ಅದು ಶರೀರವನ್ನು ವ್ಯಾಪಿಸಿ ಪ್ರಾಣಗಳ ಕ್ರಿಯೆ ನಿಲ್ಲಿಸುತ್ತೆ. ಆಗ ಜೀವವು ಶರೀರದಿಂದ ಹೊರಟು ತಾನು ಮಾಡಿದ ಕರ್ಮಫಲದಿಂದ ಸ್ವರ್ಗ ಮರ್ತ್ಯ ನರಕಗಳಲ್ಲಿ ವಾಸಿಸುತ್ತದೆ. ಕಾಶ್ಯಪರಿಗೆ ಸಿದ್ಧರು ಹೇಳಿದ ವೇದಾಂತವು ಅನುಗೀತಾ ಎಂಬುವುದಾಗಿ ಪ್ರಸಿದ್ಧವಾಗಿದೆ. ಇಲ್ಲಿ ಜೀವನ ಗರ್ಭವಾಸ, ಕರ್ಮಫಲಗಳ ವೃತ್ತಿ, ನಿವೃತ್ತಿ ಅನಿವಾರ್ಯತೆ. ಸತ್ಪುರುಷರ ಆಚರಣೆ--

ಏವಂ ಪೂರ್ವಕೃತಂ ಕರ್ಮ
ನಿತ್ಯಂ ಜನ್ತುಃ ಪ್ರಪದ್ಯತೇ

ಸರ್ವಂ ತತ್ಕಾರಣಂ ಯೇನ
ವಿಕೃತೋಽಯ ಮಿಹಾಗತಃ

ಜೀವನು ತಾನು ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಫಲವನ್ನೇ ಅನುಭವಿಸುತ್ತಾನೆ. ಹುಟ್ಟು ಸಾವುಗಳಿಗೆ ಕರ್ಮವೇ ಕಾರಣವು ಎಂಬುವುದಾಗಿ ಹೇಳಿ ಮೋಕ್ಷಪ್ರಾಪ್ತಿಗೆ ಮಾನವನು ಮಾಡಬೇಕಾದ ಕರ್ಮಗಳನ್ನು ವಿವರಿಸುತ್ತಾನೆ.

ಜೀವಿತಂ ಮರಣಂ ಚೋಭೇ
ಸುಖ ದುಃಖೇ ತಥೈವ ಚ
ಲಾಭಾಲಾಭೇ ಪ್ರಿಯ ದ್ವೇಷ್ಯೇ
ಯಃ ಸಮಃ ಸ ಚ ಮುಚ್ಯತೇ

ಯಾರು ಹುಟ್ಟು ಸಾವು, ಸುಖ ದುಃಖಗಳನ್ನು ಸಮಾನವಾಗಿ ನೋಡುವನೋ, ಯಾರು ಲಾಭ ನಷ್ಟಗಳನ್ನು, ಪ್ರಿಯರನ್ನು ಶತ್ರುಗಳನ್ನು ಸಮಾನವಾಗಿ ನೋಡುವನೋ ಅವನು ಮುಕ್ತನಾಗುತ್ತಾನೆ. ಶೀತೋಷ್ಣ ಸುಖ ದುಃಖಾದಿ ದ್ವಂದ್ವಗಳಿಂದ ಅತೀತನಾಗಿರುತ್ತಾನೆ, ಅಂತಹವನು ಯಾವುದಕ್ಕೂ ಆಸೆ ಪಡುವುದಿಲ್ಲ. ಅವನು ಕಾಮನಾರಹಿತನು. ವೈರಾಗ್ಯ ಬುದ್ಧಿಯುಳ್ಳವನು. ಸರ್ವ ಸಂಸ್ಕಾರ ನಿರ್ಮುಕ್ತನು. ಅವನ ಕರ್ತವ್ಯವು--

ತಪಸ್ವೀ ಸತತಂ ಯುಕ್ತೋ
ಯೋಗ ಶಾಸ್ತ್ರ ಮಥಾ ಚರೇತ್
ಮನೀಷೀ ಮನಸಾ ವಿಪ್ರಃ
ಪಶ್ಯತ್ಯಾತ್ಮಾನಮಾತ್ಮನಿ

(ವಿದ್ವಾಂಸನು ಸತತ ತಪಸ್ಸಿನಿಂದ ಯೋಗಾನುಷ್ಠಾನದಿಂದ ಅಂತಃಕರಣದಲ್ಲಿ ಆತ್ಮನನ್ನು ಕಾಣುತ್ತಾನೆ. ನಿಸ್ಪೃಹನಾಗಿ ಶಾಂತಮನಸ್ಕ ನಾಗಿರುತ್ತಾನೆ)

ಕೊನೆಯದಾಗಿ ಸಿದ್ಧನು ಕಾಶ್ಯಪರನ್ನು ಕುರಿತು--

ಇದಂ ಸರ್ವರಹಸ್ಯಂ ತೇ
ಮಯಾ ಪ್ರೋಕ್ತಂ ದ್ವಿಜೋತ್ತಮ
ಅಪೃಚ್ಛೇ ಸಾಧಯಿಷ್ಯಾಮಿ
ಗಚ್ಛ ವಿಪ್ರ ಯಥಾಸುಖಮ್

ನಾನು ನಿನಗೆ ಎಲ್ಲ ರಹಸ್ಯಗಳನ್ನು ಹೇಳಿರುವೆನು. ನಾನು ಇನ್ನು ಹೊರಡುತ್ತೇನೆ. ನೀನು ಸುಖವಾಗಿ ನಿನ್ನ ಸ್ಥಳಕ್ಕೆ ಹೋಗು ಎಂಬುವುದಾಗಿ ತಿಳಿಸುತ್ತಾರೆ.

## ಕಶ್ಯಪ ಮತ್ತು ಕಾಶ್ಯಪರ ಧರ್ಮಸೂತ್ರಗಳು :

ಬೌಧಾಯನ ಧರ್ಮ ಸೂತ್ರದಲ್ಲಿ ಕಶ್ಯಪನ ಮತವನ್ನು ಹೇಳುವ ಶ್ಲೋಕವು ಹೀಗಿದೆ--

ಕ್ರೀತಾ ದ್ರವ್ಯೇಣ ಯಾ ನಾರೀ
ಸಾನ ಪತ್ನೀ ವಿಧೀಯತೇ
ಸಾನದೈವೇ ನ ಸಾ ಪಿತ್ರ್ಯೇ
ದಾಸೀಂ ತಾಂ ಕಶ್ಯಪೋಽ ಬ್ರವೀತ್

ಕ್ರಯಕ್ಕೆ ಬಂದ ನಾರಿ ಪತ್ನಿಯಾಗಲಾರಳು ಅವಳು ಧಾರ್ಮಿಕ ಹಾಗೂ ಪೈತೃಕ ಕರ್ಮಗಳಲ್ಲಿ ಭಾಗವಹಿಸಲಾರಳು. ಇದು ಕಾಶ್ಯಪರ ಮತ ಇತ್ಯಾದಿ, ನಿತ್ಯ ಕರ್ಮಗಳು, ಶ್ರಾದ್ಧ ಅಶೌಚ. ಪ್ರಾಯಶ್ಚಿತ್ತ ಮುಂತಾದ ಸಾಮಾನ್ಯ ವಿಷಯಗಳನ್ನು ಕಾಶ್ಯಪ ಧರ್ಮ ಸೂತ್ರವು ಬೋಧಿಸುತ್ತದೆ. ವಿಶ್ವರೂಪ ಯಾಜ್ಞವಲ್ಕ್ಯ ಗೌತಮರು (ಸ್ಮೃತಿ ಚಂದ್ರಿಕಾದಲ್ಲಿ) ತಮ್ಮ ಧರ್ಮ ಶಾಸ್ತ್ರಗಳಲ್ಲಿ ಕಾಶ್ಯಪರ ಶ್ಲೋಕಗಳನ್ನು ಉದಹರಿಸುತ್ತಾರೆ. ಕಾಶ್ಯಪರ ಸಂಪೂರ್ಣ ಧರ್ಮ ಶಾಸ್ತ್ರ ಲಭ್ಯವಿಲ್ಲ. ಗೃಹಸ್ಥ ಧರ್ಮದಲ್ಲಿ ಪ್ರಾಯಶ್ಚಿತ್ತ ಭಾಗ ಮಾತ್ರ ಲಭ್ಯವಿದೆ. ಅದರ ಆರಂಭ ಅಥಾತಃ ಕಾಶ್ಯಪೀಯಾನ್ ಗೃಹಸ್ಥ ಧರ್ಮಾನ್ ವ್ಯಾಖ್ಯಾಸ್ಯಾಮಃ ಆಹಿತಾಗ್ನಿಃಸ್ವದಾರನಿರತೋ...... ಇತ್ಯಾದಿ.

ಇಲ್ಲಿ ಗೃಹಸ್ಥ ಧರ್ಮಗಳು, ಗೋಹತ್ಯೆ, ಪಂಚ ಮಹಾಪಾತಕಗಳಿಗೆ ಶಿಕ್ಷೆ, ಮೃತ ಸೂತಕ, ಜಾತಾಶೌಚ, ಪ್ರಾಯಶ್ಚಿತ್ತ, ಪೂರ್ವಜನ್ಮದ ಪಾಪಪುಣ್ಯಗಳ ಪರಿಚಯ, ಮಹಾಭಾರತದ ವನ ಪರ್ವದಲ್ಲಿ ಕ್ಷಮಾ ಗುಣಬಗ್ಗೆ ಕಾಶ್ಯಪನು ಹೇಳಿದ ಐದು ಗಾಥೆಗಳು ಜಗತ್ಪ್ರಸಿದ್ಧವಾಗಿವೆ.

ಕ್ಷಮಾ ಧರ್ಮಃ ಕ್ಷಮಾ ಯಜ್ಞಃ
ಕ್ಷಮಾ ವೇದಾಃ ಕ್ಷಮಾ ಶ್ರುತಂ

ಇತ್ಯಾದಿ ಶ್ಲೋಕಗಳು ಪ್ರಾತಃ ಸ್ಮರಣೀಯವಾದವು. ಪರಾಶರನು ಕಾಶ್ಯಪ ಧರ್ಮಗಳನ್ನು ತನ್ನ ಧರ್ಮ ಸೂತ್ರದಲ್ಲಿ ಕೊಂಡಾಡಿದ್ದಾನೆ. ಕಾಶ್ಯಪರು ಗೋತ್ರ ಪ್ರವರ್ತಕರಾದ ಮಹರ್ಷಿಗಳಲ್ಲಿ ಅಗ್ರಗಣ್ಯರು. ಕಾಶ್ಯಪರು ಅಪಾರ ಮಹಿಮೆಯುಳ್ಳ ಮಂತ್ರ ದ್ರಷ್ಟಾರರು. ಅನು ಶಾಸನ ಪರ್ವದಲ್ಲಿ ಬರುವ ಗರುಡನ ಹಾಗೂ ಕಾಶ್ಯಪರ ಸಂವಾದದಲ್ಲಿ ಶ್ರೀಮನ್ನಾರಾಯಣನ ಮಹಿಮೆ ಬಲು ವಿಸ್ತಾರವಾಗಿ ಇರುವುದರಿಂದ ಇದನ್ನು ಪ್ರಮಾಣವಾಗಿ ಶ್ರೀವೈಷ್ಣವರು ಸ್ವೀಕರಿಸುತ್ತಾರೆ. ಅಂತಹ ಮಹರ್ಷಿ ಕಾಶ್ಯಪರಿಗೆ ಪುನಃ ಪುನಃ ನಮಸ್ಕಾರವು.



(32 ನೇ ಪುಟದಿಂದ)

ಹೇಗೆ ಶಿಷ್ಯರ ವಿಷಯದಲ್ಲಿ ಅರುಹಿದನೋ ಹಾಗೇ ಗುರುವಿನ ವಿಷಯದಲ್ಲಿ ಎರಡು ಗುಣಗಳು ಅವಶ್ಯಕ ಎಂದು ಹೇಳುತ್ತಾನೆ. ಕೇವಲ ಪಾಂಡಿತ್ಯ ವಿದ್ದರೆ ಸಾಲದು. ಬೋಧನ ಕೌಶಲವೂ ಶಿಕ್ಷಕನ ಸಹಜ ಗುಣವಾಗಿರಬೇಕು. ಆದರ್ಶ ಅಧ್ಯಾಪಕನಲ್ಲಿ ಈ ಎರಡು ಗುಣಗಳು ಮನೆಮಾಡಿಕೊಂಡಿರುತ್ತದೆ--

ಶ್ಲಿಷ್ಟಾ ಕ್ರಿಯಾ ಕಸ್ಯಚಿದಾತ್ಮಸಂಸ್ಥಾ
ಸಂಕ್ರಾಂತಿರನ್ಯಸ್ಯ ವಿಶೇಷಯುಕ್ತಾ
ಯಸ್ಯೋಽಭಯಂ ಸಾಧು ಸ ಶಿಕ್ಷಕಾಣಾಂ
ಧುರಿಪ್ರತಿಷ್ಠಾಪಯಿತವ್ಯ ಏವ

ಶಿಕ್ಷಣದ ಹಾಗೂ ಶಿಕ್ಷಕನ ಮೌಲ್ಯ ಮಾಪನವು ನಿಪುಣರಿಂದ ಮಾಡಲ್ಪಡಬೇಕು. ಅವರ ಗುಣಗಳೂ ಅಷ್ಟೆ.

ಉಪದೇಶಂ ವಿದುಃ
ಶುದ್ಧಸಂತಸಾಮುಪದೇಶಿನಃ
ಯುಷ್ಮಾಯತೇ ನ ಯುಷ್ಮಾಸು
ಯಃ ಕಾಂಚನ ಮಿವಾಗ್ನಿಸು (ಮಾಲ)

ಶಿಕ್ಷಕರ ಅಧ್ಯಾಪನ ಯೋಗ್ಯತೆಯ ಪರೀಕ್ಷೆಯು ಅವರಿಂದ ಬೋಧಿಸಲ್ಪಟ್ಟ ವಿದ್ಯಾರ್ಥಿಗಳ ನೈಪುಣ್ಯದಿಂದಲೇ ಆಗಬೇಕು ಎಂಬುದು ಆತನ ಆಶಯ. ಹೇಗೆಂದರೆ--

ದ್ವಾವಪಿ ಕಿಲಾಗಮಿನೌ
ಪ್ರಯೋಗ ನಿಪುಣೌ
ಕಿಂತು ಶಿಷ್ಯಗುಣ ವಿಶೇಷೇಣ
ಉನ್ನಮಿತಃ ಗಣದಾಸಃ

ಇಲ್ಲಿ ಉತ್ತಮ ಶಿಷ್ಯೆ ಮಾಲವಿಕೆ. ಆದ್ದರಿಂದ ಅವಳ ಶ್ರೇಯಸ್ಸು ಅವಳ ಗುರುಗಳಾದ ಗಣದಾಸನ ಯಶಸ್ಸು. ಈ ರೀತಿಯಾಗಿ ಕಾಳಿದಾಸನ ಹಲವು ಶಿಕ್ಷಣ ವಿಷಯಕವಾದಂಥ ವಿಚಾರ ಪ್ರವಾಹವು ಅಲ್ಲಲ್ಲಿ ಹಬ್ಬಿ ಹರವಿರುವುದು. ಆತನ ಗ್ರಂಥಗಳಲ್ಲಿ ದೊರಕುತ್ತದೆ. ಅವುಗಳನ್ನು ಇಲ್ಲಿ ಸ್ಥಾಲೀಪುಲಾಕ ನ್ಯಾಯದಿಂದ ಸಂಕ್ಷೇಪವಾಗಿ ಹೇಳಿದೆ. ರಾಷ್ಟ್ರದ ಕವಿ ಕಾಳಿದಾಸನು ಸರಸ್ವತಿಯ ವರಪುತ್ರ, ಸರ್ವದಾ ವಿದ್ವಜ್ಜನರನ್ನು ಅವರ ವಿದ್ವತ್ತನ್ನು ಕೊಂಡಾಡಲಿ ಎಂದು ಆಶಿಸಿ ಆತನ ಮಾತಿನಿಂದಲೇ ವಿಸ್ತಾರ ಭಯದಿಂದ ವಿರಮಿಸುತ್ತೇನೆ.

ಸರಸ್ವತೀ ಶ್ರುತಿಮಹತೀ
ಮಹೀಯತಾಮ್ ಇತಿಶಮ್



# ವಾರ್ತಾಲಹರಿ

## ನೇತ್ರ ಚಿಕಿತ್ಸಾ ಶಿಬಿರ

ತಿರುಪತಿಯ ತಿ.ತಿ.ದೇ. ಮೂರನೇ ಧರ್ಮಸತ್ರದಲ್ಲಿ ತಿ.ತಿ.ದೇವಸ್ಥಾನಗಳ ವತಿಯಿಂದ ಹೈದರಾಬಾದಿನ ಶ್ರೀ ಸರೋಜಿನೀದೇವಿ ನೇತ್ರ ಚಿಕಿತ್ಸಾಲಯದ ನೆರವಿನಿಂದ ಫೆಬ್ರವರಿ 18 ರಿಂದ 24 ರವರೆಗೆ ನೇತ್ರ ಚಿಕಿತ್ಸಾ ಶಿಬಿರ ಏರ್ಪಾಡಾಗಿದ್ದು 1200 ಕ್ಕೂ ಹೆಚ್ಚು ಮಂದಿ ತಮ್ಮ ನೇತ್ರಗಳನ್ನು ಪರೀಕ್ಷೆ ಮಾಡಿಸಿಕೊಂಡರು.

ಸರೋಜಿನೀದೇವಿ ನೇತ್ರ ಆಸ್ಪತ್ರೆಯ ಖ್ಯಾತ ನೇತ್ರ ಚಿಕಿತ್ಸಾತಜ್ಞರಾದ ಡಾ. ಪಿ. ರಂಗರೆಡ್ಡಿ ಹಾಗೂ ಡಾ. ಶ್ರೀನಿವಾಸುಲುರೆಡ್ಡಿ ಅವರುಗಳು ನೇತ್ರ ಶಸ್ತ್ರ ಚಿಕಿತ್ಸೆಗಾಗಿ 396 ಮಂದಿಯನ್ನು ಗುರುತಿಸಿದ್ದು ಅವರುಗಳಿಗೆ ಯಶಸ್ವಿಯಾಗಿ ಶಸ್ತ್ರಚಿಕಿತ್ಸೆ ಮಾಡಲಾಯಿತು. ತಿ.ತಿ.ದೇ.ಗಳ ಹಿರಿಯ ವೈದ್ಯಾಧಿಕಾರಿ ಡಾ. ವೆಂಕಟಲಕ್ಷ್ಮಿ ಅವರು ಶಿಬಿರದ ಮೇಲುಸ್ತುವಾರಿ ನೋಡಿಕೊಂಡರು. ಶಸ್ತ್ರಚಿಕಿತ್ಸೆಗೆ ಒಳಗಾದವರಿಗೂ ಅದರ ಉಪಚಾರಕರಿಗೂ ತಿ.ತಿ.ದೇ. ಗಳ ವತಿಯಿಂದ ಉಚಿತ ಭೋಜನ ವಸತಿ ಸೌಕರ್ಯವನ್ನು ಏರ್ಪಡಿಸಲಾಗಿದ್ದಿತು. ಚಿಕಿತ್ಸೆ ಹೊಂದಿದವರಿಗೆ ಉಚಿತವಾಗಿ ಕನ್ನಡಕಗಳನ್ನು ನೀಡಲಾಯಿತು.

## ಅಖಂಡ ಸಂಕೀರ್ತನೆ

ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ 18-2-93 ರಿಂದ 19-2-93 ವರೆಗೆ 24 ಗಂಟೆಗಳ ಕಾಲ ಅನ್ನಮಾಚಾರ್ಯರ ಸಂಗೀತ ಆರಾಧನೆ ಅಖಂಡವಾಗಿ ಮೊದಲಬಾರಿಗೆ ತಿರುಪತಿಯ ಅನ್ನಮಯ್ಯಸಭಾದ ವತಿಯಿಂದ ಏರ್ಪಾಡಾಗಿ ಯಶಸ್ವಿಯಾಯಿತು.

10-2-93 ರಂದು ಬೆಳಗ್ಗೆ ಏಳುಗಂಟೆಗೆ ತಿರುಪತಿಯ ಶ್ರೀ ಕೋದಂಡರಾಮಸ್ವಾಮಿಯ ರಥಬೀದಿಗಳಲ್ಲಿ ಅನ್ನಮಾಚಾರ್ಯರ ಚಿತ್ರಪಟದ ಮೆರವಣಿಗೆಯ ನಂತರ ಕಲಾಮಂದಿರದಲ್ಲಿ ಸಂಗೀತವಿದ್ವಾಂಸ ಪಶುಪತಿ ಅವರು ಜ್ಯೋತಿ ಬೆಳಗಿಸುವುದರ ಮೂಲಕ ಸಂಕೀರ್ತನಾರಾಧನೆಯನ್ನು ಆರಂಭಿಸಿದರು. ಎಸ್. ವಿ. ಸಂಗೀತ ಕಲಾಶಾಲೆಯ ಪ್ರಾಂಶುಪಾಲ ಶ್ರೀ ನೂಕಲ ಚಿನ ಸತ್ಯನಾರಾಯಣ, ಅನ್ನಮಾಚಾರ್ಯ ಪ್ರಾಜೆಕ್ಟಿನ ಶ್ರೀ ಬಾಲಕೃಷ್ಣಪ್ರಸಾದ್, ಅನ್ನಮಯ್ಯ ಸಭಾದ ಸಂಚಾಲಕ ಶ್ರೀ ಎಸ್. ವಿ. ಆನಂದ ಭಟ್ಟರು ಮುಂತಾದವರು ಭಾಗವಹಿಸಿದ ಸಂಕೀರ್ತನಾರಾಧನೆ 19-2-93 ರ ಬೆಳಗ್ಗೆ ಎಂಟು ಗಂಟೆಯವರೆಗೆ ನಿರಂತರವಾಗಿ ನಿರಾತಂಕವಾಗಿ ನಡೆಯಿತು. ಅಶೇಷ ಜನ ಭಾಗವಹಿಸಿದರು.

## ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ ಆರಂಭ

ತಿರುಪತಿಯಲ್ಲಿ ತಿ. ತಿ. ದೇ.ಗಳ ವತಿಯಿಂದ ನಿರ್ಮಾಣವಾದ (ಅಂದಾಜುವೆಚ್ಚ ಮುವತ್ತೈದು ಕೋಟಿ ರೂಪಾಯಿಗಳು) ಶ್ರೀ ವೆಂಕಟೇಶ್ವರ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ 26-2-93 ರಂದು ಸರಳ ಸಮಾರಂಭದೊಡನೆ ಆರಂಭವಾಯಿತು. ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ ಅವರು ಜ್ಯೋತಿ ಬೆಳಗಿಸುವುದರ ಮೂಲಕ ಆರಂಭಗೊಳಿಸಿದ ಈ ವಿಶೇಷ ಚಿಕಿತ್ಸೆಗಳ ಆಸ್ಪತ್ರೆಯಲ್ಲಿ ವೈವಿಧ್ಯಮಯವಾದ ಆಧುನಿಕ ಯಂತ್ರೋಪಕರಣಗಳ ನೆರವಿನಿಂದ ವಿವಿಧ ರೋಗಗಳ ಚಿಕಿತ್ಸೆ ನಡೆಸಲಾಗುವುದು.

ಈ ಆಸ್ಪತ್ರೆಯಲ್ಲಿನ ಚಿಕಿತ್ಸೆಯಲ್ಲಿ ಹಲವು ಭಾಗ ಬಡವರಿಗೆ ಉಚಿತವಾಗಿಯೂ ಧನವಂತರಿಗೆ ಸರಸ ದರಗಳದ್ದೂ ಆಗಿರುತ್ತವೆ ಎಂದು ಪ್ರೊ. ಕೆ. ಸುಬ್ಬರಾವ್ ಅವರು (ಚೇರ್ಮನ್ ಎಸ್.ವಿ.ಐ.ಎಂ.ಎಸ್.) ಅವರು ತಿಳಿಸಿದ್ದಾರೆ. ಆರಂಭದ ಎರಡು ವರ್ಷಗಳಿಗಾಗಿ ಹಣವನ್ನು ತಿ.ತಿ.ದೇ. ಮಂಜೂರು ಮಾಡಿದೆ ಎಂಬುದನ್ನು ಇಲ್ಲಿ ನೆನೆಯಬಹುದು.

## ನಿತ್ಯಾನ್ನದಾನ ಯೋಜನೆಯ ವಿಸ್ತರಣೆ

ತಿರುಮಲೆಗೆ ಬರುವ ಯಾತ್ರಿಕರಿಗಾಗಿ ಉಚಿತ ಭೋಜನ ನೀಡುವ ತಿ.ತಿ.ದೇಗಳ ನಿತ್ಯಾನ್ನದಾನ ಯೋಜನೆಯನ್ನು ಇನ್ನಷ್ಟು ವ್ಯಾಪಕಗೊಳಿಸುವುದಾಗಿ ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಿ. ವೆಂಕಟರಾಮಯ್ಯನವರು ತಿಳಿಸಿದ್ದಾರೆ. ಪ್ರಸ್ತುತ ಪ್ರತಿದಿನವೂ ಹದಿನೈದು ಸಾವಿರ ಮಂದಿಗೆ ಉಚಿತ ಭೋಜನ ನೀಡುತ್ತಿರುವುದಾಗಿಯೂ ಮುಂದಿನ ಒಂದೆರಡು ವರ್ಷಗಳಲ್ಲಿ ಈ ಸಂಖ್ಯೆಯನ್ನು 20 ಸಾವಿರಕ್ಕೆ ಏರಿಸಲು ಕ್ರಮಗಳನ್ನು ಕೈಗೊಳ್ಳುತ್ತಿರುವುದಾಗಿಯೂ ತಿಳಿಸಿದರು. ನಿತ್ಯಾನ್ನದಾನ ಯೋಜನೆಗೆ ಇದುವರೆಗೆ ಎಂಟು ಕೋಟಿ ರೂಪಾಯಿಗಳ ದತ್ತಿ ಬಂದಿದೆಯೆಂದೂ ಅಷ್ಟೇ ಮೊತ್ತವನ್ನು ತಿ.ತಿ.ದೇ.ಗಳು ಸೇರಿಸಿ ಈ ಒಟ್ಟು ಮೂಲಧನದ ಮೇಲಿನ ಬಡ್ಡಿಯಿಂದ ಯೋಜನೆಯನ್ನು ನಡೆಸುತ್ತಿರುವುದಾಗಿಯೂ, ಈ ಯೋಜನೆಗೆ ಬಂದಿರುವ ದತ್ತಿಗಳಲ್ಲಿ 65 ಶತಾಂಶ ಮಧ್ಯಮತರಗತಿಯವರಿಂದ ಬಂದಿರುವುದಾಗಿಯೂ ಅವರು ತಿಳಿಸಿದರು.

## ಧ್ಯಾನ ಮಂದಿರ

ತಿರುಪತಿಯಿಂದ ತಿರುಮಲೆಗೆ ಹೋಗುವ ಕಾಲುಹಾದಿಯಲ್ಲಿ 3 ಕಿಮಿ. ದೂರದಲ್ಲಿನ ಶ್ರೀ



ಅನ್ನಮಯ್ಯ ಗಾನಸಭಾದ ಅಖಂಡ ಸಂಕೀರ್ತನಾರಾಧನೆ.

ನರಸಿಂಹಸ್ವಾಮಿ ಮಂದಿರದ ಬಳಿ ವಶಿಷ್ಠ ಕುಟೀರ ಎಂಬ ಧ್ಯಾನ ಮಂದಿರವನ್ನು ಯಾತ್ರಿಕರ ಸೌಲಭ್ಯಕ್ಕಾಗಿ ನಿರ್ಮಿಸಲಾಗುವುದೆಂದು ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಿ. ವೆಂಕಟರಾಮಯ್ಯನವರು ತಿಳಿಸಿದ್ದಾರೆ.

ಪಾಂಡಿಚೆರಿಯ ಪ್ರಸಿದ್ಧ ಅರೋವಿಲೆಯ ಮಾದರಿಯಲ್ಲಿ ನಿರ್ಮಿತವಾಗುವ ಈ ಧ್ಯಾನ ಮಂದಿರದಲ್ಲಿ ಆಧ್ಯಾತ್ಮಿಕ ಪುಸ್ತಕ ಭಂಡಾರವೂ ಇರುವುದೆಂದು ಅವರು ತಿಳಿಸಿದರು.

## ತಿ. ತಿ. ದೇ. ಗಳಿಗೆ ದ್ವಿಚಕ್ರ ವಾಹನ

ಹೊಸೂರಿನ ಟಿ.ವಿ.ಎಸ್. ಸುಜುಕಿ ಸಂಸ್ಥೆಯವರು ತಯಾರಿಸಿದ ನಾಲ್ಕು ದ್ವಿಚಕ್ರವಾಹನಗಳನ್ನು ತಿ.ತಿ.ದೇ. ಗಳಿಗೆ ಸಮರ್ಪಿಸಲಾಗಿದೆ.

ಟಿ.ವಿ.ಎಸ್. ಸುಜುಕಿಯ ಮಾರಾಟ ವಿಭಾಗದ ಜನರಲ್ ಮ್ಯಾನೇಜರ್ ಶ್ರೀ ಆರ್. ಎಲ್. ರವಿಚಂದ್ರನ್ ಹಾಗೂ ವೆಲ್ಲೂರಿನ ಶ್ವೇತ ಎಂಟರ್‌ಪ್ರೈಸಸ್‌ನ ಮ್ಯಾನೇಜರ್ ಶ್ರೀ ಚಂದ್ರಶೇಖರ್ ಅವರುಗಳು ಈ ವಾಹನಗಳನ್ನು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ ಅವರಿಗೆ ಸರಳ ಸಮಾರಂಭವೊಂದರಲ್ಲಿ ಒಪ್ಪಿಸಿಕೊಟ್ಟರು. ಈ ನಾಲ್ಕು ವಾಹನಗಳ ಬೆಲೆ 1.4 ಲಕ್ಷ ರೂಪಾಯಿಗಳು.

## ತಿರುಮಲೆಯಲ್ಲಿ ಶೃಂಗೇರಿ ಸ್ವಾಮಿಜೀ

ಕರ್ನಾಟಕದ ಶೃಂಗೇರಿಯ ಶ್ರೀ ಶಂಕರಾಚಾರ್ಯ ಅವರು ಈಚೆಗೆ ತಿರುಮಲೆಗೆ ಆಗಮಿಸಿ ಶೃಂಗೇರಿ ಮಠದಲ್ಲಿಳಿದುಕೊಂಡು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸೇವಿಸಿದರು.

ಹಲವಾರು ಧಾರ್ಮಿಕ ಕಾರ್ಯಕ್ರಮಗಳಲ್ಲೂ ಪಾಲುಗೊಂಡ ಅವರು ತಿರುಪತಿ ಹಾಗೂ ತಿರುಚಾನೂರು ದೇವಾಲಯಗಳನ್ನೂ ದರ್ಶಿಸಿ ಆರಾಧನೆ ನಡೆಸಿದರು.

## ಹದಿನೈದು ಲಕ್ಷ ರೂ. ಕಾಣಿಕೆ

ಫೆಬ್ರವರಿ 20 ರಂದು ಶುಕ್ರವಾರದಂದು ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯ ಹುಂಡಿಯಲ್ಲಿ ಅಜ್ಞಾತ ಭಕ್ತರೊಬ್ಬರು 15 ಲಕ್ಷ ರೂ.ಗಳನ್ನು ಕಾಣಿಕೆಯಾಗಿ ನೀಡಿದ್ದಾರೆ. ಶನಿವಾರ ಬೆಳಗ್ಗೆ ಹುಂಡಿಯ ಕಾಣಿಕೆಗಳ ಪರಕಾಮಣಿಯಲ್ಲಿ ಒಂದೇ ಕಟ್ಟಿನಲ್ಲಿದ್ದ ಈ ಮೊತ್ತವನ್ನು ಗುರುತಿಸಲಾಯಿತು. ಇದರಿಂದಾಗಿ ಶನಿವಾರದ ಪರಕಾಮಣಿಯಲ್ಲಿ ಸ್ವಾಮಿಯ ಆದಾಯ 22 ಲಕ್ಷ ರೂಪಾಯಿಗಳಾಗಿದ್ದಿತು ಎಂದು ವರದಿಯಾಗಿದೆ.



ತಿರುವಣ್ಣಾಮಲೈನ ಪುಸ್ತಕ ಪ್ರದರ್ಶನ ಮಾರಾಟ ಶಾಲೆ.

## ತಿರುಮಲೆಯಲ್ಲಿ ಉಚಿತ ವಾಹನ ಸೌಕರ್ಯದ ಆಧಿಕ್ಯ

ತಿರುಮಲೆಯಲ್ಲಿ ಬೇರೆ ಬೇರೆ ಸ್ಥಳಗಳ ಕಾಟೇಜುಗಳಿಂದ ದೇವಾಲಯದ ಬಳಿಗೆ ಹೋಗಿ ಬರುವ ಯಾತ್ರಿಕರ ಸೌಲಭ್ಯಕ್ಕಾಗಿ ತಿ.ತಿ.ದೇ.ಗಳು ಉಚಿತ ವಾಹನಗಳು ಇದುವರೆಗೆ ಎರಡುಮಾತ್ರವೇ ಇದ್ದು ಮತ್ತೂ ಎರಡು ಬಸ್‌ಗಳನ್ನು ಈ ಕೆಲಸದಲ್ಲಿ ತೊಡಗಿಸಲಾಗಿದೆ. ಫೆಬ್ರವರಿ ತಿಂಗಳಿನಲ್ಲಿ ಈ ನೂತನ ಬಸ್‌ಗಳ ಸೇವೆಯನ್ನು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ ಅವರು ಪೂಜೆಯ ಮೂಲಕ ಆರಂಭ ನಡೆಸಿಕೊಟ್ಟರು. ಇದರಿಂದಾಗಿ ಯಾತ್ರಿಕರು ವಿವಿಧ ಕಾಟೇಜುಗಳಿಂದ ದೇವಾಲಯದ ವರೆಗೆ ನಡೆಯುವಿಗೆಯನ್ನು ತಪ್ಪಿಸಿರುವುದೇ ಅಲ್ಲದೆ ಉಚಿತ ಬಸ್ಸಿಗಾಗಿ ಕಾಯುವ ಅವಧಿಯನ್ನೂ ಕಡಿಮೆಗೊಳಿಸಿದಂತಾಗಿದೆ.

## ಪುಸ್ತಕ ಮಾರಾಟ

ಶಿವರಾತ್ರಿಯ ವಿಶೇಷ ಪರ್ವದಿನದಂದು ಶಿವಾಲಯಗಳಿಗೆ ವಿಶೇಷವಾಗಿ ಯಾತ್ರಿಕರು ಭಕ್ತರು ಬರುವುದನ್ನು ಪುರಸ್ಕರಿಸಿಕೊಂಡು ತಿ.ತಿ.ದೇ.ಗಳು ಆಂಧ್ರಪ್ರದೇಶದ ಶ್ರೀಶೈಲ, ಕೋಟಪ್ಪಕೊಂಡ, ಅಮರಾವತಿ, ಗೋವಾಡ, ತಿರುಪತಿಯ ಕಪಿಲತೀರ್ಥ ಮೊದಲಾದ ಎಡೆಗಳಲ್ಲಿ ವಿಶೇಷ ರಿಯಾಯಿತಿ ದರಗಳಲ್ಲಿ ತಿ.ತಿ.ದೇ. ಧಾರ್ಮಿಕ ಗ್ರಂಥಗಳನ್ನು ಮಾರಾಟ ಮಾಡಲು ಪುಸ್ತಕ ಪ್ರದರ್ಶನ ಶಾಲೆಗಳನ್ನು ಏರ್ಪಡಿಸಿತ್ತು. ಜೊತೆಗೇ ಈ ವರ್ಷ ಪುಸ್ತಕ ಪ್ರದರ್ಶನ ಮಾರಾಟ ಶಾಲೆಗಳನ್ನು ತಮಿಳುನಾಡಿನ ತಿರುವಣ್ಣಾಮಲೈ, ಚಿದಂಬರಂಗಳಲ್ಲೂ ಏರ್ಪಾಡು ಮಾಡಲಾಗಿದ್ದಿತು. ಇಲ್ಲೆಲ್ಲ ತಿ.ತಿ.ದೇ. ಪ್ರಕಟನಶಾಖೆಯ ಪುಸ್ತಕಗಳು ರಿಯಾಯಿತಿ ದರಗಳಲ್ಲಿಯೂ (ಆರು ರೂಗಳಿಗೆ ಕಡಿಮೆ ಬೆಲೆಯ ಪುಸ್ತಕಕ್ಕೆ 25 ಶತಾಂಶ, ಆರು ಹಾಗೂ ಹೆಚ್ಚಿನ ಬೆಲೆಯ ಪುಸ್ತಕಗಳಿಗೆ 50 ಶತಾಂಶ ರಿಯಾಯಿತಿ), ಧ್ವನಿ ಸುರುಳಿಗಳೂ, ವೀಡಿಯೋ ಕ್ಯಾಸೆಟ್‌ಗಳೂ, ಚಿತ್ರಗಳೂ, ಕ್ಯಾಲೆಂಡರ್‌ಗಳೂ ವಿಶೇಷವಾಗಿ ಮಾರಾಟವಾದವು. ✪

ಸಪ್ತಗಿರಿಯಲ್ಲಿ ನಿಮ್ಮ ಅಭಿಪ್ರಾಯಕ್ಕೆ ಸ್ವಾಗತ.

ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ.

ತಿರುಮಲೆಯ ಸಾವಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ. ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ, ತಿ.ತಿ.ದೇ. ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ. ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ. ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್. ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು.

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ. ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ: ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ. ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ.

ಶಿಲ್ಪಶಾಸ್ತ್ರ : ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ.

ವಿಗ್ರಹಗಳು : ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ.

ಆಳ್ವಾರ್‌ಗಳು : ವಿಶಿಷ್ಟಾದ್ವೈತ ತತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ. ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು.

ಸಮಯಾಚಾರಗಳು : ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ. ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ. ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ.

ಕಲೆ : ಹರಿದಾಸರ ಹಿರಿಮೆಯನ್ನೂ; ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ. ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ೮ನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ. ೩ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ.

ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆ ಭೇಟಿ ನೀಡಿರಿ.

---

**ಕಾಲ : ಬೆಳಗ್ಗೆ ೮ ರಿಂದ**

**ರಾತ್ರಿ ೮ ರ ವರೆಗೆ**

**ಟಿಕೆಟ್ ರೂ. ೧--೦೦ (ಹಿರಿಯರಿಗೆ)**

**„ „ ೦--೫೦ (ಕಿರಿಯರಿಗೆ)**

# ತಿಂಗಳಿನ ಮುಖ್ಯದಿನಗಳು

## ಮೇ --- 1993

2\. ಭಾನುವಾರ ಪದ್ಮಾವತೀ ಶ್ರೀನಿವಾಸ ಪರಿಣಯ ಸಮಾಪ್ತಿ.

4\. ಮಂಗಳವಾರ ತಿರುಪತಿಯಲ್ಲಿ ಗಂಗಾಜಾತ್ರೆ ಆರಂಭ.
ನಾಗುಲಾಪುರದಲ್ಲಿ ಬ್ರಹ್ಮೋತ್ಸವಾರಂಭ.

5\. ಬುಧವಾರ ಶ್ರೀನೃಸಿಂಹಜಯಂತಿ, ಶ್ರೀ ಕೂರ್ಮಜಯಂತಿ.

6\. ಗುರುವಾರ ಅನ್ನಮಾಚಾರ್ಯ ಜಯಂತಿ.

8\. ಶನಿವಾರ ನಾಗುಲಾಪುರದಲ್ಲಿ ಬ್ರಹ್ಮೋತ್ಸವದ ಗರುಡೋತ್ಸವ.

11\. ಮಂಗಳವಾರ ತಿರುಪತಿ ಗಂಗಾಜಾತ್ರೆ ಸಮಾಪ್ತಿ.
ನಾಗುಲಾಪುರದಲ್ಲಿ ರಥೋತ್ಸವ.

16\. ಭಾನುವಾರ ಹನುಮಜ್ಜಯಂತಿ.

26\. ಬುಧವಾರ ತಿರುಪತಿಯಲ್ಲಿ ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವಾರಂಭ.

31\. ಸೋಮವಾರ ಹೃಷೀಕೇಶ್, ಅಪ್ಪಲಾಯಗುಂಟ, ನಾರಾಯಣವನಗಳಲ್ಲಿ ಬ್ರಹ್ಮೋತ್ಸವ ಅಂಕುರಾರ್ಪಣ
ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಪ್ಲವೋತ್ಸವಾರಂಭ.
ತಿರುಪತಿಯಲ್ಲಿ ಶ್ರೀ ಗೋವಿಂದರಾಜಸ್ವಾಮಿ ಗರುಡೋತ್ಸವ.

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಮೇ 1993

**ರಮಣಮಹರ್ಷಿ**
--ಗುರುನಾಥ ಇನಾಮದಾರ

**ದೂರ್ವಾಸನ ಕ್ರೋಧವೇ ನೀನು**
--ವಿದ್ವಾನ್ ಬ. ನ. ಗುಂಡೂರಾವ್

**ಬಿಜಾಪುರದ ನೃಸಿಂಹಕ್ಷೇತ್ರಗಳು.**
--ತುಂಗಾತನಯ

**ವೇದಾಂತ ಕಬ್ಬಿಣದ ಕಡಲೆಯಲ್ಲ**
--ಪಾರ್ವತಿ ಕೃ. ನ. ಮೂರ್ತಿ

**ಶ್ರೀ ಯಾಮುನಾಚಾರ್ಯ ವಿರಚಿತ ಸ್ತೋತ್ರರತ್ನ**
--ಡಾ. ವಿ. ಎಸ್. ಸಂಪತ್ಕುಮಾರಾಚಾರ್ಯ

**ಜೊತೆಗೇ ಆಕರ್ಷಕವಾದ ಮತ್ತೂ ಹಲವಾರು ಸಾಮಯಿಕ ಲೇಖನಗಳು**

**ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ.**

ಸೂಚನೆ: ಸಪ್ತಗಿರಿ ವಾರ್ಷಿಕ ಚಂದಾ ಹನ್ನೆರಡು ರೂಪಾಯಿ ಮಾತ್ರ. ತಮ್ಮ ಚಂದಾ ಹಣವನ್ನು ಎಂ. ಓ. ಡಿ.ಡಿ. ಯ ಮೂಲಕ ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ -- ಇವರಿಗೆ ಕಳುಹಿಸಿ: ವಿಳಾಸವನ್ನು ಸ್ಪಷ್ಟವಾಗಿ ಬರೆಯಿರಿ ಎಂದು ವಿನಂತಿ.



ತಿರುಮಲೆ -- ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿಸಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಪೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ---

1\. ಶ್ರೀ ವೇದನಾರಾಯಣಸ್ವಾಮಿ ಆಲಯ
--ನಾಗುಲಾಪುರಂ.

2\. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ
--ನಾರಾಯಣವನಂ.

3\. ಶ್ರೀ ವೇಣುಗೋಪಾಲಸ್ವಾಮಿ ಆಲಯ
--ಕಾರ್ವೇಟಿನಗರ.

4\. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ
--ಅಪ್ಪಲಾಯಗುಂಟ.

5\. ಶ್ರೀ ವೆಂಕಟೇಶ್ವರಸ್ವಾಮಿ ಆಲಯ
--ಶ್ರೀನಿವಾಸಮಂಗಾಪುರ.

6\. ಆಲಯಸಮುದಾಯ --ಹೃಷೀಕೇಶ.

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇವಸ್ಥಾನಗಳು,**
ತಿರುಪತಿ.



Edited and published on behalf of T.T. Devasthanams by K. Subba Rao, M.A., and Printed at T.T.D. Press
by M. Vijayakumar Reddy, Manager, T.T.D. Press, Tirupati - 517 507

